# ಕರ್ಮವೀರ

ಹುಬ್ಬಳ್ಳಿ ತಾ. [illegible]

ಸಂಪುಟ ೨೮ ] [ ಸಂಚಿಕೆ [illegible]

ಜನಪ್ರಿಯ ಸಚಿತ್ರ ವಾರಪತ್ರಿಕೆ

ಸಂಪಾದಕರು: [illegible] ರಾ. ಪುರೋಹಿತ ]

[ ಸಂಸ್ಥಾಪಕರು— [illegible] ರಂ. ರಾ. ದಿವಾಕರ

## ಬಲ್ಲವರ ನುಡಿ

ವಿಪತ್ತನ್ನು ಎಲ್ಲರೂ ಎದುರಿಸಬಲ್ಲರು; ಆದರೆ ಮನುಷ್ಯನ ಚಾರಿತ್ರ್ಯವನ್ನು ಪರೀಕ್ಷಿಸಬೇಕಾದರೆ ಅವನಿಗೆ ಅಧಿಕಾರವನ್ನು ಕೊಟ್ಟು ನೋಡು!

—ಅಬ್ರಹಾಂ ಲಿಂಕನ್

★

ನಾವು ಒಬ್ಬರನ್ನೊಬ್ಬರು ಸರಿಯಾಗಿ ಅರಿತುಕೊಳ್ಳಬೇಕಾದರೆ ಸ್ವಲ್ಪಕಾಲವಾದರೂ ಒಬ್ಬರ ಸ್ಥಿತಿಯಲ್ಲಿ ಇನ್ನೊಬ್ಬರು ಇದ್ದು ಅನುಭವ ಪಡೆಯಬೇಕು. ಪ್ರತಿಯೊಬ್ಬ ಡಾಕ್ಟರನೂ ಒಂದು ಶಸ್ತ್ರಕ್ರಿಯೆ ಮಾಡಿಸಿಕೊಂಡು ನೋಡಬೇಕು; ಪ್ರತಿಯೊಬ್ಬ ಪೋಲೀಸ ಮಂತ್ರಿಯೂ ಕೆಲ ತಿಂಗಳುಗಳನ್ನಾದರೂ ಸೆರೆಮನೆಯಲ್ಲಿ ಕಳೆಯಬೇಕು; ಮತ್ತು ಪ್ರತಿಯೊಬ್ಬ ಕಾರಖಾನೆದಾರನೂ ಕೆಲಸಗಾರ ಸಂಘದ ಸದಸ್ಯನಾಗಬೇಕು.

—ರೆವರೆಂಡ ಡಾಹಲಬರ್ಗ

★

ತಾಸಿನ ಸುಖ ಬೇಕೆಂದಿದ್ದರೆ ಹೆಂಡ ಕುಡಿ. ಮೂರು ದಿನಗಳ ಸುಖ ಬೇಕಾದರೆ ಮದುವೆಯಾಗು. ಎಂಟು ದಿನಗಳ ಸುಖ ಬೇಕಾದರೆ ಒನ್ನ ಹಂದಿಯನ್ನು ಕೊಂದು ತಿನ್ನು. ಅನಂತ ಸುಖ ಬೇಕಾಗಿದ್ದರೆ ತೋಟಗಾರನಾಗು.

—ಚೀನೀ ನಾಣ್ಣುಡಿ



### ಜನರಲ್ ರಾಜೇಂದ್ರಸಿಂಗಜಿ

ಹೈದರಾಬಾದ ಸತ್ರದ ವೀರರೆನಿಸಿದ ಮಹಾರಾಜ ಲೆಫ್ಟಿನೆಂಟ್ ಜನರಲ್ ಶ್ರೀ. ರಾಜೇಂದ್ರಸಿಂಗಜಿಯವರು ನವಾನಗರದ ರಾಜಕುಟುಂಬದವರು. ಎರಡನೆ ಮಹಾಯುದ್ಧದಲ್ಲಿ ಉತ್ತರ ಆಫ್ರಿಕೆಯ ಮಳಲುಗಾಡಿನಲ್ಲಿ ಅತ್ಯಂತ ಪರಾಕ್ರಮದಿಂದ ಜರ್ಮನ್ನರನ್ನೂ ಇಟಾಲಿಯನ್ನರನ್ನೂ ಎದುರಿಸಿ ಹೋರಾಡಿದ್ದಕ್ಕಾಗಿ ಅವರಿಗೆ ಡಿ. ಎಸ್. ಓ. ಬಿರುದು ಬಂದಿತ್ತು. ಈಗ ಅವರು ದಕ್ಷಿಣ ಸೇನಾಧಿಪತ್ಯದ ಮುಖ್ಯ ಸೇನಾಪತಿಗಳಾಗಿದ್ದು ಹೈದರಾಬಾದಿನಲ್ಲಿ ವಿಜಯವನ್ನು ದೊರಕಿಸಿ ಕೊಟ್ಟು ಕೀರ್ತಿಶಾಲಿಗಳಾಗಿದ್ದಾರೆ.

## ಹೈದರಾಬಾದಿನ ಭವಿತವ್ಯವೇನು?

— ಪುಟ ೫

## ದೇವತೆಗಳ ಮೊರೆ

— ಪುಟ ೧೬



KARMAVEER - KANNADA ILLUSTRATED WEEKLY - HUBLI

## ಚಿಕ್ಕಕತೆ

# ಕಳಕೊಂಡ ಪತ್ರ



ಬಿ. ವ್ಹಿ. ಪಪ್ಪು, ಪುಣೆ

ಆಂದು ಗೋವಿಂದರಾಯನು ಬಹಳ ಖಿನ್ನಮನಸ್ಕನಾಗಿದ್ದನು. ನಿಜವಾಗಿ ನೋಡಿದರೆ ಅವನು ಒಳ್ಳೇ ಆನಂದದಲ್ಲಿ ಇರಬೇಕಾಗಿತ್ತು. ಯಾಕೆಂದರೆ ಆಫೀಸಿನಲ್ಲಿಯ ಅವನ ಸಾಹೇಬರು ಅವನಿಗೆ ಹೊಸದಾಗಿ ಕೊಟ್ಟ ಕೆಲಸದಲ್ಲಿ ಒಂದೆರಡು ತಿಂಗಳಲ್ಲಿ ಕುಶಲತೆಯನ್ನು ತೋರಿಸಿದರೆ ಅವನಿಗೆ ಮೇಲಿನ ಜಾಗೆಯನ್ನು ಕೊಡುತ್ತೇನೆಂದು ಹೇಳಿದ್ದರು. ಅದ್ದರಿಂದ ಗೋವಿಂದರಾಯನಿಗೆ ಮನ ಗೊಟ್ಟು ದಕ್ಷತೆಯಿಂದ ಕೆಲಸ ಮಾಡಬೇಕಾಗಿತ್ತು. ಕಳೆದ ೩-೪ ದಿವಸದಿಂದ ಮನೆಯಲ್ಲಿಯ ಸಣ್ಣ ಪುಟ್ಟ ಕೆಲಸಗಳನ್ನು ಅಂದರೆ ಕೇಶನ್ನು ಪಳ್ಳೆಕಾಯಿ ಮತ್ತು ಪೇಟೆಯಿಂದ ಇತರ ಸಾಮಾನುಗಳನ್ನು ತರುವದು, ಅಗಸನಿಗೆ ಒಗೆಯಲಿಕ್ಕೆ ಅರಿವೆಗಳನ್ನು ಕೊಡುವದು, ಇವೆಲ್ಲ ಕೆಲಸಗಳನ್ನು— ತನ್ನ ಹೆಂಡತಿ ರಾಧಾಬಾಯಿ ಮತ್ತು ಮಗಳು ಸುನಂದೆಗೆ ಒಪ್ಪಿಸಿಬಿಟ್ಟಿದ್ದನು. ಸುನಂದೆಗೆ ಮ್ಯಾಟ್ರಿಕ್‌ದ ಅಭ್ಯಾಸವಿದ್ದದರಿಂದ ಅವಳು ಸ್ವಲ್ಪ ಗುಣುಗುಣು ಮಾಡಿದರು ಕೂಡ ರಾಧಾಬಾಯಿಯು ಅವಳಿಗೆ ಕೈಲಾದ ಮಟ್ಟಿಗೆ ಸಹಾಯ ಮಾಡುವೆನೆಂದು ಆಶ್ವಾಸನವನ್ನು ಕೊಟ್ಟಿದ್ದರಿಂದ ಗೋವಿಂದರಾಯನು ಮನೆಯ ಎಲ್ಲ ಕೆಲಸಗಳಿಂದ ಮುಕ್ತನಾಗಿದ್ದನು. ಅದ್ದರಿಂದ ಇತ್ತೀಚೆಗೆ ಗೋವಿಂದರಾಯನ ದಿನದ ಕಾರ್ಯಕ್ರಮವೆಂದರೆ ಬೆಳಿಗ್ಗೆ ಎದ್ದು ಜಪವನ್ನು ತಕ್ಕೊಂಡವನೇ ಸ್ನಾನಮಾಡುವದು, ಆ ಮೇಲೆ ಸ್ವಲ್ಪ ಉಪಹಾರವಾದ ನಂತರ ಎಂಟು ಗಂಟೆಗೆ ಆಫೀಸಿಗೆ ಹೋಗುವದು, ಮಧ್ಯಾನ್ಹ ೧೨ ಗಂಟೆಗೆ ಮನೆಗೆ ಬಂದು ಊಟವನ್ನು ಮುಗಿಸಿಕೊಂಡು ಮತ್ತೆ ಒಂದು ಗಂಟೆಯ ನಂತರ ಆಫೀಸಿನಲ್ಲಿ ತನ್ನ ಟೇಬಲ್ಲಿನ ಎದುರಿಗೆ ಕೆಲಸಕ್ಕೆ ಕೂಡುವದು. ಕೆಲಸ ಮುಗಿಸಿಕೊಂಡು ಸಂಜೆಗೆ ಮನೆಗೆ ಬರಬೇಕಾದರೆ ಎಂಟು ಹೊಡೆಯುತ್ತಿತ್ತು. ಈ ಪ್ರಕಾರ ಅವನು ತನ್ನ ಮನೆ ಮತ್ತು ಕಚೇರಿಯ ಕೆಲಸ ಇವರಲ್ಲಿ ಇತರ ಜಗತ್ತನ್ನೇ ಮರೆತು ಬಿಟ್ಟಿದ್ದನು.

ಹಾಗೆ ವಿಚಾರ ಮಾಡಿ ನೋಡಿದರೆ ಗೋವಿಂದರಾಯನು ಇಷ್ಟು ಮನಗೊಟ್ಟು ಏಕೆ ಕೆಲಸ ಮಾಡಬಾರದು? ಅವನಿಗೆ ಸ್ವಲ್ಪ ದಿನಗಳಲ್ಲಿ ಮೇಲಿನ ಜಾಗೆಯು ಸಿಗುವದಿತ್ತು. ಎರಡು ತಿಂಗಳೊಳಗಾಗಿ ಅವನು ಕೆಲಸದಲ್ಲಿ ನಿಪುಣತೆಯನ್ನು ತೋರಿಸಿ ಮೇಲಿನ ದರ್ಜೆಯನ್ನು ಸಂಪಾದಿಸುವವನಿದ್ದನು. ಇತರ ಕಾರಕೂನರೊಳಗೆ ಅವನ ಹುದ್ದೆಯು ಹೆಚ್ಚಾಗುವದಲ್ಲದೇ ಪ್ರತ್ಯಕ್ಷ ಅವನ ಕೈಕೆಳಗೆ ೫-೬ ಜನರು ಕೆಲಸ ಮಾಡುವವರಿದ್ದರು. ಸಮಾಜದಲ್ಲಿ ಸಹ ಅವನ ಸ್ಥಾನವು ಏರುವದಿತ್ತು. "ಸುಪರಿಂಟೆಂಡೆಂಟ" ಆದನೆಂದರೆ ಅವನೂ ಒಬ್ಬ ಪ್ರತಿಷ್ಠಿತ ಮನುಷ್ಯನೆಂದು ಗಣಿಸಲ್ಪಡುವವನಿದ್ದನು. ಇದಲ್ಲದೆ ಆಫೀಸಿನ ಚಿಕ್ಕ ಕೊಡೆಯಲ್ಲಿ ಕುಳಿತು ಗಂಟೆ ಬಡೆದು ತನ್ನ ಕೈಕೆಳಗಿದ್ದ ಕಾರಕೂನರನ್ನು ಕರೆಸಿ ಅವರ ಮೇಲೆ ಅಧಿಕಾರವನ್ನು ನಡೆಸುವವನಿದ್ದನು. ಒಟ್ಟಿಗೆ ಅವನು ಒಬ್ಬ ಸಣ್ಣ ಸಾಹೇಬನೇ ಆಗುವವನಿದ್ದನು.

ಆದರೆ ಗೋವಿಂದರಾಯನ ಇವೆಲ್ಲ ಮನೋರಥಗಳು ಕಳಚಿ ಬೀಳುವ ಪ್ರಸಂಗವು ಅಂದು ಬಂದಿತ್ತು. ಅದ್ದರಿಂದಲೇ ಅವನ ಮನಸ್ಸು ಉದ್ವಿಗ್ನವಾಗಿತ್ತು. ೩-೪ ದಿನಗಳ ಹಿಂದೆ ಹಿಂದುಸ್ಥಾನ ಮಧ್ಯಸರಕಾರದ ಅರ್ಥಖಾತೆಯಿಂದ ಬಂದ ಒಂದು ಒಳ್ಳೇ ಮಹತ್ವದ ಪತ್ರವು ಅವನಿಗೆ ಸಿಗದಾಗಿತ್ತು. ನೀಲಿಯ ನುಣುಪಾದ ಕಾಗದದ ಮೇಲೆ "Govt of India" ಎಂದು ಛಾಪಿಸಿದ ಅಕ್ಷರಗಳು, ಅದರ ಮೇಲೆ ಸಾಹೇಬನು "Very Urgent" ಎಂದು ತನ್ನ ಸ್ವಹಸ್ತದಿಂದ ಕೆಂಪು ಪೆನ್ಸಿಲಿನಿಂದ ಬರೆದ ಅಕ್ಷರಗಳು ಅವನ ಕಣ್ಣೆದುರಿಗೆ ಕಟ್ಟಿದ್ದವು: ಕಳೆದ ೩-೪ ದಿವಸಗಳಲ್ಲಿ ಮುಂಜಾನೆ ಹಾಸಿಗೆಯಿಂದ ಎದ್ದಾಗಿನಿಂದ ರಾತ್ರಿ ಮಲಗುವ ವರೆಗೆ ತಾನು ಮಾಡಿದ ಪ್ರತಿಯೊಂದು ಕೆಲಸವನ್ನು ಕೂಲಂಕಷವಾಗಿ ವಿಚಾರ ಮಾಡಿ ನೆನೆದುಕೊಂಡನು. ಆ ಕಾಗದವು ಸಿಕ್ಕರೆ ತಿರುಪತಿ ವೆಂಕಟರಮಣನಿಗೆ ಆರತಿಯನ್ನು ಮಾಡಿಸುವೆನೆಂದು ಬೇಡಿಕೊಂಡು ಮುಡುಪನ್ನು ಸಹ ತೆಗೆದಿಟ್ಟನು. ಆದರೆ ವ್ಯರ್ಥ. ಯಾವ ಕೆಲಸದ ಕಡೆಗೂ ಅವನ ಲಕ್ಷ್ಯವು ಹತ್ತಲೊಲ್ಲದು. ಊಟಕ್ಕೆ ಕುಳಿತಾಗ ಸಹ ಏನೋ ವಿಚಾರ ಮಾಡುತ್ತಿದ್ದವನ ಹಾಗೆ ಯಾರ ಕೂಡಲೂ ಮಾತಾಡದೆ ಹಾಗೇ ಕೂಡುತ್ತಿದ್ದನು. ಅವನ ಖಿನ್ನ ಮನಸ್ಸನ್ನು ನೋಡಿ ರಾಧಾಬಾಯಿಯು "ಯಾಕೆ? ಈಗ ಎರಡು ದಿನ ಏನಾಗಿರುತ್ತದೆ? ಪ್ರಕೃತಿ ನೆಟ್ಟಗಿರುವದಿಲ್ಲೋ ಹೇಗೆ? ಆಫೀಸಿನಲ್ಲಿ ಕೆಲಸವು ಬಹಳವಿರುತ್ತದೆಂದು ಕಾಣುತ್ತದೆ. ದಿನಾಲು ಊಟ ಮಾಡುವಾಗ್ಗೆ ಏನಾದರೊಂದು ಸುದ್ದಿ ಹೇಳುತ್ತ ವಿನೋದದಿಂದ ಊಟ ಮಾಡುವವರು ಇವತ್ತಿನ ದಿವಸ ಹಾಗೆಯೇ ಸುಮ್ಮನೇ ಏಕೆ ಕುಳಿತಿರುತ್ತೀರಿ?" ಗೋವಿಂದರಾಯನು ಆದ ಸಂಗತಿಯನ್ನು ಹೇಳಿದನು, ರಾಧಾಬಾಯಿಯರಂದರು "ಹೌದು, ನನ್ನ ತಮ್ಮ ರಾಮೂನ ಕಡೆಯಿಂದ ೭-೮ ದಿವಸಗಳ ಹಿಂದೆ ಬಂದ ಪತ್ರವನ್ನು ಸಹ ಸುನಂದೆಯು ಎಲ್ಲಿ ಇಟ್ಟಾಳೋ ಏನೋ. ನಾನು ಹುಡುಕಿ ಬೇಸತ್ತೆ."

"ಅಲ್ಲೆ... ಹಿಂದುಸ್ತಾನದ ಮಧ್ಯಸರಕಾರದ ಪತ್ರಕ್ಕೆ ನಿನ್ನ ತಮ್ಮನ ಪತ್ರವನ್ನು ಹೋಲಿಸುವಿಯೇನು? ಆ ಪತ್ರವು ಸಿಗದಿದ್ದರೆ ನನಗೆ ಮುಂದಿನ ಬಢತಿಯು ಸಿಗುವದಂತೂ ಒತ್ತಟ್ಟಿಗಿರಲಿ ಆದರೆ ನನ್ನ ಕೆಲಸವು ಉಳಿಯುವದು ಸಹ ದುಸ್ತರವಾಗುವದು."

ಆ ದಿನ ಗೋವಿಂದರಾಯನು ಆಫೀಸಿಗೆ ಹೋದ ಕೂಡಲೆ ತನ್ನ ಟೇಬಲ್ಲಿನ ಮೇಲೆ ಇದ್ದ ಎಲ್ಲ ಕಾಗದಗಳನ್ನು ಒಂದೊಂದಾಗಿ ಹುಡುಕಿದನು. ನೀಲಿಯ ಕಾಗದವು ಎಲ್ಲಿಯಾದರೂ ದೃಷ್ಟಿಗೆ ಬಿದ್ದ ಕೂಡಲೇ ಹುಲಿಯು ಹೊಂಚಿಟ್ಟು ಶಿಕಾರಿಯ ಮೇಲೆ ಹಾರಿದ ಹಾಗೆ ಅವನು ಆ ಕಾಗದವನ್ನು ಸರಕ್ಕನೆ ತೆಗೆದು ನೋಡುತ್ತಿದ್ದನು. ಅವನ ಹತ್ತರ ಕೂಡುವ ಎಸ್. ರಾಜನ್ ಅಂದನು "ಎಷ್ಟು ಗಾಬರಿಯಾಗುವಿರಿ ಮಿಸ್ಟರ ದೇಶಪಾಂಡೆ? ಇಂದಿಲ್ಲ ನಾಳೆ ಆ ಕಾಗದವು ಸಿಗಬಹುದು. ಎಲ್ಲಿ ಹೋಗುತ್ತದೆ?" ಅವನು ನಕ್ಕ ಕೂಡಲೇ ಅವನ ಕೃಷ್ಣ ಮುಖದೊಳಗಿಂದ ಕಾಣುವ ಬಿಳಿಯ ಕಂತ ಪಂಕ್ತಿಗಳ ಕಡೆಗೆ ಗೋವಿಂದರಾಯನ ಲಕ್ಷ್ಯವು ಎಳ್ಳಷ್ಟೂ ಇದ್ದಿಲ್ಲ. ಅವನ ಲಕ್ಷ್ಯವೆಲ್ಲ ಏಕಮೇವ ಆ ಕಾಗದದ ಮೇಲೆಯೇ. ಗೋವಿಂದರಾಯನ ಎದುರಿಗೆ ಕೂಡುವ ಇನ್ನೊಬ್ಬ ಕಾರಕೂನ— ಒಬ್ಬ ಪಾರಸೀ ಗೃಹಸ್ಥ ತನ್ನ ಗೋಲಗುಮ್ಮಟದಂತೆ ಇದ್ದ ಬಾಯಿಯಿಂದ ಉಚ್ಚರಿಸಿದನು "ಇಷ್ಟೇಕೆ ಕಾಳಜೀ ಮಾಡುತ್ತೀರಿ? ನೀವು ಈ ಮೊದಲೇ ಈ ಸುದ್ದಿಯನ್ನು ತಿಳಿಸಿದ್ದರೆ ಹಿಂದುಸ್ತಾನ ಸರಕಾರಕ್ಕೆ ಪತ್ರ ಬರೆದು ಆ ಪತ್ರದ ನಕಲನ್ನು ತರೆಸಿಕೊಳ್ಳಲಿಕ್ಕೆ ಬರುತ್ತಿತ್ತು. ಇಷ್ಟು ದಿನ ಸುಮ್ಮನೆ ಏಕೆ ಕುಳಿತಿರಿ?"

ಗೋವಿಂದರಾಯನಿಗೆ ಏನೂ ತೋಚದಾಯಿತು. ಅವನಿಗೆ ಹಿಂದಿನ ಇಂಥದೆ ಒಂದು ಪ್ರಸಂಗದ ನೆನಪಾಯಿತು. ಒಬ್ಬ ದೊಡ್ಡ ಆಫೀಸರನ ಬಿಲ್ಲು "ಪ್ರೀ ಆಡಿಟ್"ಕ್ಕೆ ಬಂದಿತ್ತು. ಏನು ಮಾಡಿದರೂ ಸಿಗಲೊಲ್ಲದು ಮನೆಯಲ್ಲಿ ಎಲ್ಲರನ್ನೂ ಕೇಳಿದನು. ಆಫೀಸಿನಲ್ಲಿ ಎಲ್ಲ ಕಾಗದಗಳಲ್ಲಿ ಹುಡುಕಿದರೂ. ಅದು ಸಿಗಲಿಲ್ಲ. ಆಗ್ಗೆ ಸಹ ಅವನು ತಿರುಪತಿಯ ವೆಂಕಟರಮಣನಿಗೆ ಬೇಡಿಕೊಂಡಿದ್ದನು. ಕಡೆಗೆ ಹುಡುಕಿ ಹುಡುಕಿ ಬೇಸತ್ತು ಅದರ ಹವ್ಯಾಸವನ್ನು ಬಿಟ್ಟು ಬಿಟ್ಟಿದ್ದನು. ಮೂರನೆಯ ದಿನ ತನ್ನ ಹಳೆಯ ಕೋಟಿನ ಕಿಸೆಯಲ್ಲಿ ಇಟ್ಟ ಬೀಡಿಗಳನ್ನು ತಕ್ಕೊಳ್ಳುವದಕ ಸಲುವಾಗಿ ಕೈ ಹಾಕಿದ ಕೂಡಲೇ ಅವನ ಕೈಗೆ ಒಂದು ಲಕೋಟೆಯು ಹತ್ತಿತು. ಅದನ್ನು ತೆಗೆದು ನೋಡಿದನು. ಆದರೆ ಆಶ್ಚರ್ಯ, ಅದು ಅವನ ಕಳಕೊಂಡ ಬಿಲ್ಲು. ಆಗ್ಗೆ ಅವನಿಗೆ ಆದ ಆನಂದವು ಅವನಿಗೆ ನೆನಪಾಯಿತು.

ಗೋವಿಂದರಾಯನು ತನ್ನ ಮರವುಳ್ಳ ಸ್ವಭಾವಕ್ಕೆ ತನ್ನನ್ನು ತಾನೇ ಹಳಿದುಕೊಂಡನು. ಹಿಂದುಸ್ತಾನ ಸರಕಾರದ ಪತ್ರವು ಕಳೆದದ್ದಕ್ಕೆ ಅವನಿಗೆ ತನ್ನ ಭವಿಷ್ಯದ ಬಗ್ಗೆ ಇಷ್ಟೇ ಅಲ್ಲ; ಆದರೆ ಮತ್ತೂ ಒಂದು ಕಾರಣದ ಮೂಲಕ ವಿಶೇಷ ಚಿಂತಿಸುತ್ತಿತ್ತು. ಇನ್ನೊಂದು ೩-೪ ವರ್ಷಗಳ ನಂತರ ಸುನಂದೆಯು ಬಿ.ಎ. ಪಾಸು ಆಗುವವಳಿದ್ದಳು. ಗೋವಿಂದರಾಯನ ಸಾಹೇಬ ರಾವಬಹಾದ್ದೂರ ಕುಲಕರ್ಣಿ ಇವರ ಮಗ ವಸಂತರಾಯನಾದರೂ B. E. (Civil) ಎಂಜಿನಿಯರ ಪರೀಕ್ಷೆ ಪಾಸಾಗಿ ಮೂರನೇ ವರ್ಷ ಮುಂದಿನ ಶಿಕ್ಷಣದ ಸಲುವಾಗಿ ಅಮೇರಿಕೆಗೆ ಹೋಗುವವನಿದ್ದನು. ತನ್ನ ಹುದ್ದೆಯು ಏರಿದ ಕೂಡಲೆ— ಅಂದರೆ ತಾನು ಸುಪರಿಂಟೆಂಡೆಂಟ ಆದ ನಂತರ ರಾವಬಹಾದ್ದೂರರ ಮುಂದೆ ಸುನಂದೆಯನ್ನು ವಸಂತನಿಗೆ ಕೊಡಬೇಕೆಂಬ ಮಾತನ್ನು ತೆಗೆಯಬೇಕೆಂದು ಎಷ್ಟೋ ಸಾರೆ ಯೋಚಿಸಿದ್ದನು. ಒಂದೆರಡು ಸಾರೆ ರಾಧಾಬಾಯಿಯರೆದುರು ಈ ಮಾತನ್ನು ಆಡಿ ಸಹ ತೋರಿಸಿದ್ದನು. ಆದರೆ ರಾವಬಹಾದ್ದೂರರೆದುರಿಗೆ ಈ ಮಾತನ್ನು ತೆಗೆಯುವ ಧೈರ್ಯವು ಅವನಿಗಾಗಿದ್ದಿಲ್ಲ. ಯಾಕಂದರೆ ರಾವಬಹಾದ್ದೂರರು ಅವನ ಮೇಲಿನ ಸಾಹೇಬರು.

ಗೋವಿಂದರಾಯನ ಈ ಎಲ್ಲ ಆಶೆ ಆಕಾಂಕ್ಷೆಗಳು ಹಿಂದುಸ್ತಾನ ಸರಕಾರದ ಪತ್ರದ ಮೂಲಕ ಕುಸಿದು ಬಿದ್ದಿದ್ದಿಲ್ಲ. ಅವನಿಗೆ ಏನು ಮಾಡಬೇಕು ತೋಚದಾಯಿತು. ತನ್ನ ಕೆಟ್ಟ ನಶಿಬವಿಷ್ಟೇ ಅಲ್ಲದೆ ಸುನಂದೆಯಾದರೂ ಎಷ್ಟು ದುರ್ದೈವಿ ಎಂದು ತಿರುತಿರುಗಿ ಅವನಿಗೆ ಎನಿಸುತ್ತಿತ್ತು.

ಮರುದಿನ ಅವನು ಆಫೀಸಿಗೆ ಹೋದ ಕೂಡಲೆ ಅವನ ಟೇಬಲ್ಲಿನ ಮೇಲೆ ಹಿಂದುಸ್ತಾನ ಸರಕಾರದ ತಾರು. ಅದರಲ್ಲಿ ಮೊದಲಿನ ಪತ್ರಕ್ಕೆ ಉತ್ತರವನ್ನು ಬೇಡಲ್ಪಟ್ಟಿತ್ತು. ಅದನ್ನು ನೋಡಿದ ಮೇಲಂತೂ ಗೋವಿಂದರಾಯನ ಎದೆಯು "ಡವ ಡವ" ಬಡೆಯಲಾರಂಭಿಸಿತು. ಅವನು ಕುರ್ಚಿಯ ಮೇಲೆ ಕೂಡಬೇಕೆಂಬುವಷ್ಟರಲ್ಲಿ ಟೊಂಕಕ್ಕೆ ಕೆಂಪು ಪಟ್ಟಿಯನ್ನು ಕಟ್ಟಿಕೊಂಡು ಎದೆಯ ಮೇಲೆ ಬಿಲ್ಲೆಯನ್ನು ಹಾಕಿಕೊಂಡ ಶಿಪಾಯಿಯು "ಸಾಹೇಬರು ಕರೆಯುತ್ತಾರೆ" ಎಂದು ಬಂದು ಹೇಳಿದನು. ಫಾಶಿಯಶಿಕ್ಷೆಗೆಹೋಗುವ ಕೈದಿಯಂತೆ ಗೋವಿಂದರಾಯನ ಮನಸ್ಥಿತಿಯಾಯಿತು. ಅವನು ಸಾಹೇಬನ ಕಡೆಗೆ ಹೊರಡಲು ಸಿದ್ಧನಾದನು. "ಟೊಪ್ಪಿಗೆ ಸರಿ ಮಾಡಿಕೊಳ್ಳಿರಿ" ಎಂದು ಎಸ್. ರಾಜನ್ನರು ಹೇಳಿ ತನ್ನ ಶುಭ್ರ ದಂತಪಂಕ್ತಿಗಳನ್ನು ತೋರಿಸಿದನು. "ಕೋಟಿನ ಗುಂಡಿಗಳನ್ನು ಹಾಕಿಕೊಳ್ಳಿರಿ ಮತ್ತು ಅಷ್ಟು ಘಾಬರಿಯಾಗಬೇಡಿರಿ" ಎಂದು ನಗುತ್ತ ಗೋವಿಂದರಾಯನ ಪಾರಿಸೀ ಗೆಳೆಯ ಬಮ್ಮನಜಿಯು ಹೇಳಿದನು. ಅಂತೂ ಇಂತೂ ಗೋವಿಂದರಾಯನು ಸಾಹೇಬನ ಟೇಬಲ್ಲಿಗೆದುರಿಗೆ ಬಂದು ಉಪಸ್ಥಿತನಾದನು. "ಹಿಂದುಸ್ತಾನ ಸರಕಾರದ ಪತ್ರಕ್ಕೆ ಉತ್ತರವು ಹೋಗಿದೆಯಲ್ಲವೇ?" ಎಂದು ಸಾಹೇಬನು ಕೇಳಿದನು. ಗೋವಿಂದರಾಯನಿಗೆ ಸಾಹೇಬನನ್ನು ನೋಡುವ ಧೈರ್ಯವಾಗಲಿಲ್ಲ. ಅವನು ತನ್ನ ಮೊಗವನ್ನೆತ್ತಿ ಸಾಹೇಬನ ಕಡೆಗೆ ನೋಡಬೇಕೆನ್ನುವಷ್ಟರಲ್ಲಿ ಅವನ ದೃಷ್ಟಿಯು ಸಾಹೇಬನ ಟೇಬಲ್ಲಿನ ಮೇಲೆ ಇದ್ದ ನೀಲಿಯ ಕಾಗದದ ಮೇಲೆ ಬಿದ್ದಿತು. ಅವನು ಅದನ್ನು ತಕ್ಕೊಂಡು ನೋಡಿದನು. ಆದರೆ ಪರಮಾಶ್ಚರ್ಯ! ಅದು ಅವನು ಕಳಕೊಂಡ ಹಿಂದುಸ್ತಾನ ಸರಕಾರದ ಪತ್ರ. ಅದು ಸಾಹೇಬರ ಟೇಬಲ್ಲಿನ ಮೇಲೆ ಹೇಗೆ ಬಂದಿತೆಂಬುದು ಅವನಿಗೆ ತಿಳಿಯದಾಯಿತು. ರಾವಬಹಾದ್ದೂರರಂದರು "ಆ ಪತ್ರದ ಉತ್ತರವನ್ನು ನಾನು ಮೊನ್ನೆಯೇ ಕಳಿಸಿರುತ್ತೇನೆ. ಆದರೆ ಇಂದಿನ ದಿವಸ ಬಂದ ತಾರಿಗೆ ಉತ್ತರವು ಹೋಯಿತೋ ಇಲ್ಲವೋ? ಇಲ್ಲವಾದರೆ ಇವತ್ತಿನ ದಿವಸ ಉತ್ತರವು ಹೋಗಲಿ."

ಗೋವಿಂದರಾಯನ ಹೋದ ಜೀವವು ತಿರುಗಿ ಬಂದ ಹಾಗಾಯಿತು. ಅವನಿಗೆ ಆದ ಆನಂದವನ್ನು ಬಣ್ಣಿಸಲು ಅಸಾಧ್ಯ. ಅವನಿಗೆ ಆಕಾಶವು ಎರಡೇ ಬಟ್ಟು ಉಳಿದಹಾಗಾಯಿತು. ರಾವಬಹಾದ್ದೂರರು ಮುಂದೆ ಅಂದರು. "ಆದರೆ ಹಿಂದುಸ್ತಾನ ಸರಕಾರದ ಪತ್ರದ ಹಿಂದೆ ಇದ್ದ ಮಜಕೂರನ್ನು ಓದಿದಿರೇನು?" ಗೋವಿಂದರಾಯನು ಆ ನೀಲಿಯ ಕಾಗದವನ್ನು ತಕ್ಕೊಂಡು ತಿರುವಿ ನೋಡಿದನು. ಅದರ ಮೇಲೆ ಸುನಂದೆಯ ಹಸ್ತಾಕ್ಷರಗಳು. ಅವನು ಆಶ್ಚರ್ಯಚಕಿತನಾಗಿ ಪತ್ರವನ್ನು ಓದಲಾರಂಭಿಸಿದನು.

"ಪ್ರಿಯ ವಸಂತ,

ಮೊನ್ನೆ ನಾವು ಸಂಜೆಯ ೫ ಕಡೆಗೆ ಊರ ಹೊರಗೆ ತಿರುಗಾಡಲು ಹೋದಾಗ್ಗೆ ನನ್ನ ಹೃದ್ಗತವನ್ನು ನಿನಗೆ ತಿಳಿಸಿಯೇ ಇರುವೆ. ನಮ್ಮಿಬ್ಬರ ವಿಚಾರ ಮತ್ತು ಧ್ಯೇಯವು ಒಂದೇ ಆಗಿರುತ್ತದೆ. ನೀನು ಅಮೇರಿಕೆಗೆ ಹೋಗುವಷ್ಟರಲ್ಲಿ ನಾವಿಬ್ಬರೂ ಮದುವೆ ಆಗಿ ನಿನ್ನ ಸಹಚಾರಿಣಿ ಎಂದು ನಾನು ನಿನ್ನ ಕೂಡ ಅಮೇರಿಕೆಗೆ ಬಂದರೆ ಎಷ್ಟು ಒಳಿತಾದೀತು. ನನ್ನ ಮುಂದಿನ ಶಿಕ್ಷಣಕ್ಕೆ ನಿನ್ನಿಂದ ಏನೂ ಸಹಾಯವಾಗಲಾರದೇ? ಆದರೆ ಇವೆಲ್ಲ ನಮ್ಮ ಮನೋರಥಗಳು! ಕೈಗೂಡುವ ಬಗೆ ಹೇಗೆ? ಇದರ ಬಗ್ಗೆ ನನಗೆ ಹೆಚ್ಚಾಗಿ ಕಾಳಜಿ ಉಂಟಾಗಿದೆ. ಅಪ್ಪನು ಮತ್ತು ರಾವಬಹಾದೂರರು ನಮ್ಮಿಬ್ಬರ ಮದುವೆಗೆ ಎಷ್ಟರ ಮಟ್ಟಿಗೆ ಸಮ್ಮತಿ ಕೊಟ್ಟಾರೆಂಬ ದೊಡ್ಡ ಪ್ರಶ್ನೆಯು ನನ್ನ ಎದುರು ಬಂದು ನಿಲ್ಲುತ್ತದೆ. ಅದರಲ್ಲಿ ಅಪ್ಪನು ರಾವಬಹದ್ದೂರರ ಆಫೀಸಿನಲ್ಲಿ ಅವರ ಕೈಕೆಳಗೆ ಕೆಲಸ ಮಾಡುವವನು. ಅಂದಮೇಲೆ ನಮ್ಮ ಇಚ್ಛೆಗೆ ಅವರ ಅನುಮತಿಯು ಸಿಗುವದು ಕಷ್ಟವೆಂದು ನನಗೆ ಎನಿಸುತ್ತದೆ. ಆದರೂ ಬಹಳ ದಿವಸಗಳಿಂದ ನನ್ನ ಮನೋಗತವನ್ನು ತಿಳಿಸಬೇಕೆಂದಿದ್ದು ಇವತ್ತಿನ ದಿವಸ ನಿನಗೆ ತಿಳಿಸಿರುತ್ತೇನೆ. ನನ್ನ ಹೃದಯದ ಈ ವಿಚಾರಗಳನ್ನು ನಿನಗೆ ತಿಳಿಸದೆ ಹಾಗೆಯೇ ಇಟ್ಟುಕೊಳ್ಳಲು ಸಾಧ್ಯವಾಗಲಾರದೆ ನಾನು ಈ ಪತ್ರವನ್ನು ಬರೆದಿರುತ್ತೇನೆ. ಕ್ಷಮೆ ಇರಲಿ. ನಿನ್ನವಳೇ

ಸುನಂದಾ

ಪತ್ರವನ್ನು ಓದಿದ ಹಾಗೆ ಗೋವಿಂದರಾಯನ ಮುಖಚರ್ಯೆಯು ಬದಲಾಗುತ್ತ ಅದು ಆನಂದಮಿಶ್ರಿತ ಕಳೆಯಿಂದ ಆವರಿಸಲ್ಪಟ್ಟಿತು. "ಇದು ನನ್ನ ಮಗಳು ಸುನಂದೆಯ ಪತ್ರ. ಇಲ್ಲಿಗೆ ಹೇಗ ಬಂತು.?" ಎಂದು ರಾವಬಹಾದ್ದೂರರನ್ನುದ್ದೇಶಿಸಿ ಅಂದನು.

ಗೋವಿಂದರಾಯನು ಮನೆಗೆ ಕೆಲವು ಆಫೀಸಿನ ಕಾಗದಗಳನ್ನು ತಂದಾಗ್ಗೆ ಆ ಪತ್ರವು ಮರೆತು ಅವನ ಟೇಬಲ್ಲಿನ ಮೇಲೆ ಹಾಗೆಯೇ ಉಳಿದಿತ್ತು. ಒಳ್ಳೆ ಅಂದವಾದ ನುಣುಪಾದ ಕಾಗದವನ್ನು ನೋಡಿ ಸುನಂದೆಯು ಅದರ ಮೇಲೆ ವಸಂತನಿಗೆ ಮೇಲಿನ ಪತ್ರವನ್ನು ಬರೆದಿದ್ದಳು. ತನ್ನ ಪ್ರೇಮಪತ್ರದ ಭರದಲ್ಲಿ ಆ

—೧೫ನೆಯ ಪುಟಕ್ಕೆ

* [illegible]

# ಹೈದರಾಬಾದ ಶರಣುಬಂತು — ಮುಂದೇನು ?

## ಸುಳ್ಳು ಔದಾರ್ಯದ ಮೋಹಕ್ಕೆ ನಾವು ಬೀಳಬಾರದು

### ಅಪರಾಧಿಗಳಿಗೆ ತಕ್ಕ ಶಾಸನವಾಗಲೇಬೇಕು

ಹೈದರಾಬಾದಿನ ಮೇಲೆ ಭಾರತ ಸರಕಾರ ಕೈಕೊಂಡ ಸೈನಿಕ ಕ್ರಮ ಹಾಹಾಯೆನ್ನುವುದರಲ್ಲಿ ಮುಗಿದುಹೋಯಿತು. ನಾವು ಈ ಅಭಿಯೋಗದಲ್ಲಿ ಐದು ದಂಡುಗಳಷ್ಟು ಸೈನ್ಯವನ್ನೂ ಪ್ರಚಂಡ ಶಸ್ತ್ರಾಸ್ತ್ರಬಲವನ್ನೂ ಉಪಯೋಗಿಸಿದ್ದರಿಂದ ಇಂಥ ಶೀಘ್ರ ವಿಜಯ ಸಾಧ್ಯವಾಯಿತೆಂಬಲ್ಲಿ ಸಂಶಯವಿಲ್ಲ. ಬಡಾಯಿ ಕೊಚ್ಚಿಕೊಳ್ಳುತ್ತಿದ್ದ ನಿಜಾಮರ ಸೈನ್ಯದ ಪ್ರತಿಭಟನೆ ಪಲಾಯನದಲ್ಲೇ ಕಂಡುಬಂತಲ್ಲದೆ. ಹೋರಾಟದಲ್ಲಿಲ್ಲ ನಿಜಾಮರ ಬಹುಪ್ರಚಾರ ಪಾತ್ರವಾಗಿದ್ದ ವಿಮಾನಪಡೆ ಕಡೆತನಕ ಕಾಣಿಸಿಕೊಳ್ಳಲೇ ಇಲ್ಲ. ಹಿಂದುಸ್ಥಾನಕ್ಕೆ ೫ ವರ್ಷಗಳ ವರೆಗೆ ಶಾಂತಿಯಿಲ್ಲದಂತೆ ಮಾಡುವೆನೆಂದ ರಜಾಕಾರರು ೮೦೦೦ ಕ್ಕಿಂತ ಹೆಚ್ಚು ಪ್ರಾಣಗಳನ್ನು ಬಲಿಕೊಟ್ಟರೂ ಅವರ ಪ್ರತಿಭಟನೆ ಹೇಳಿಕೊಳ್ಳುವಂಥದಿರಲಿಲ್ಲ. ಅವರ ನಾಯಕನಾದ ರಜವಿಯನ್ನು ಸೆರೆಹಿಡಿಯಲಾಗಿದೆ. ಅವನು ಕೆಂಪುಕೋಟೆಯ ವರೆಗೆ ಅಸಫಜಾಹಿ ಧ್ವಜದೊಡನೆ ನುಗ್ಗುವ ಹಂಬಲ ಇಟ್ಟುಕೊಂಡಿದ್ದ. ಈಗ ನಮ್ಮ ಸರಕಾರ ಅವನ ಹಂಬಲವನ್ನು ಪೂರೈಸಿ ಕೆಂಪುಕೋಟೆಗೇ ಅವನನ್ನೊಯ್ದು ವಿಚಾರಣೆ ನಡೆಸುವುದಂತೆ.

ಜನರಲ್ ಚೌಧರಿಯವರು
ಸೊಲ್ಲಾಪುರದಿಂದ ವಿಜಯಯಾತ್ರೆ

ನಿಜಾಮ ಸೈನ್ಯದ ಮತ್ತು ರಜಾಕಾರರ "ಶೌರ್ಯ"ಕ್ಕೆ ಬೆಲೆ ಕಟ್ಟುವ ಕೆಲಸ ಅನವಶ್ಯಕವೂ ಅನುದಾತ್ತವೂ ಎನಿಸೀತು. ಅದನ್ನು ಸಂಬಂಧಪಟ್ಟವರೇ ಭಾವಿಸಿಕೊಳ್ಳಬೇಕು. ನಾವಂತೂ ಹೈದರಾಬಾದಿನಲ್ಲಿ ಶಾಂತಿ ಸುವ್ಯವಸ್ಥೆಗಳನ್ನು ಕಾಯಬೇಕೆಂದು ಅದನ್ನು ಸೈನ್ಯದ ಆಡಳಿತೆಗೆ ಒಪ್ಪಿಸಿದ್ದೇವೆ ಹೈದರಾಬಾದಿನಲ್ಲಿ ನಿಜಾಮರ ಅಥವಾ ಅವರು ಹೇಳಿದಂತೆ ಕುಣಿದವರ ಇಲ್ಲವೆ ಅವರನ್ನು ಕುಣಿಸಿದವರ ಅಪ್ಪಣೆಗಳು ಇನ್ನು ನಡೆಯುವದಿಲ್ಲ. ನಮ್ಮ ಸರಕಾರದ ಅಪ್ಪಣೆ ನಡೆಯುತ್ತದೆ.

### ಮೈಮರೆಯದಿರೋಣ

ಆದರೆ ಬರಿ ನಾಲ್ಕು ದಿನ ಹದಿಮೂರು ತಾಸುಗಳಲ್ಲಿ ನಮ್ಮ ಸೈನ್ಯಗಳು ದೊರಕಿಸಿಕೊಟ್ಟ ಈ ಅಪೂರ್ವ ವಿಜಯದ ಉಬ್ಬಿನಲ್ಲಿ ನಾವು ಮೈಮರೆತು ಮುಂದೆ ಸಾಗಬಾರದು. ಹೈದರಾಬಾದಿನಲ್ಲಿ ಸಾಮಾನ್ಯ ಸ್ಥಿತಿಯನ್ನು ಸ್ಥಾಪಿಸುವ ಕೆಲಸ ಈಗ ಸಿಕ್ಕಿದ ವಿಜಯದಷ್ಟು ಸುಲಭವಲ್ಲ. ಹಲವು ಗುಳಿಗುಂಪುಗಳು, ಜೋನು ಬಲೆಗಳು ನಮಗಾಗಿ ಕಾದಿರಬಹುದು. ಅವುಗಳನ್ನೆಲ್ಲ ನಾವು ಸುರಕ್ಷಿತವಾಗಿ ದಾಟದೆ ಹೋದರೆ ನಮ್ಮ ಆಶೋತ್ತರಗಳಾಗಲಿ ಹೈದರಾಬಾದಿನ ಜನತೆಯ ಉತ್ತರೋತ್ತರವಾಗಲಿ ಸಿದ್ಧಿಸುವ ಸಂಭವವಿಲ್ಲ.

ಹೈದರಾಬಾದಿನ ಮೇಲೆ ಕ್ರಮವನ್ನು ಯೋಜಿಸಿ ಯಶಸ್ವಿಯಾದವರು ಈ ಸಮಸ್ಯೆಯ ಎಲ್ಲ ಅಂಶಗಳನ್ನೂ ಅಭ್ಯಸಿಸಿ ಅದಕ್ಕೆ ತಕ್ಕ ಉಪಾಯಗಳನ್ನು ಯೋಜಿಸುತ್ತಿದ್ದಾರೆಂಬಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ವಿಜಯೋನ್ಮಾದವಲ್ಲದಿದ್ದರೂ ಔದಾರ್ಯದ ಅತಿರೇಕ ಕೆಲವುಸಾರೆ ಕಠೋರ ವಸ್ತುಸ್ಥಿತಿಯನ್ನು ಅವರ ದೃಷ್ಟಿಯಿಂದ ಮರೆಮಾಚುವ ಸಂಭವವಿದೆ. ಅಂಥ ದೃಷ್ಟಾಂತಗಳು ಹಿಂದಿನ ಇತಿಹಾಸದಲ್ಲಿವೆ, ಮುಂದೆ ಬರಲಾರವೆಂಬನಿಯಮವಿಲ್ಲ.

ನಮ್ಮ ನಾಯಕರು ಇದನ್ನು "ದಯಾದೌತ್ಯ"ವೆಂದು ಕರೆದಿದ್ದಾರೆ. ಅವರ ಅರ್ಥ, ಹೈದರಾಬಾದಿನ ದಲಿತ ಪ್ರಜೆಗಳಿಗಾಗಿ ದಯೆ ಎಂದಿದೆಯೇನೋ ನಿಜ. ಆದರೆ ಅದನ್ನು ಪೀಡಕರ ಮೇಲೆಯೂ ದಯೆ ಎಂಬ ಅರ್ಥಕ್ಕೆ ಮಾರ್ಪಡಿಸಲು ಹೆಣಗುವವರು ಇಲ್ಲದಿಲ್ಲ. ಈಗಾಗಲೆ ಇಷ್ಟೆಲ್ಲ ಅನಾಹುತಗಳಿಗೆ ಕಾರಣರಾದ ನಿಜಾಮರನ್ನು ಔದಾರ್ಯದಿಂದ ನಡೆಸಿಕೊಳ್ಳಬೇಕೆಂದು ಸಲಹೆಕೊಡುವ ಗೆಳೆಯರು ಮುಂದೆ ಬರತೊಡಗಿದ್ದಾರೆ. ಸರ್ ಮಿರ್ಜಾ ಇಸ್ಮಾಯಿಲರಂಥ ವರ್ಚಸ್ವಿಗಳು ಇಂಥ ಸೂಚನೆ ಮಾಡಿದ್ದಾರೆಂದ ಮೇಲೆ ಅದು ತುಂಬ ಪ್ರಭಾವ ಬೀರುವದೆಂದು ಲೆಕ್ಕ ಹಿಡಿಯಬಹುದು. ಆದರೆ ಇದರಲ್ಲಿದೆ ನಮ್ಮ ಮೊದಲನೆ ಗಂಡಾಂತರ. ಈ ಔದಾರ್ಯಗುಣದ ಫಲವನ್ನು ಭಾರತ ಅನೇಕ ಬಾರಿ ಅನುಭವಿಸಿದೆ.

ನಿಜಾಮ ಸೇನಾನಿ ಜನರಲ್ ಎಡ್ರೂಜ
ಅವರ ಪಾಲಿಗೆ ಶರಣಾಗತಿ

ಇತಿಹಾಸವನ್ನೋದಿದವರಿಗೆ ಇದನ್ನು ಹೇಳಬೇಕಾದುದಿಲ್ಲ.

### ನಿಜಾಮರ ವಿಚಾರಣೆಯಾಗಬೇಕು

ಇಡಿ ಪ್ರಕರಣದಲ್ಲಿ ನಿಜಾಮರು ನಡೆದುಕೊಂಡ ರೀತಿಯನ್ನು ನೋಡಿರಿ. ಮೊದಲು ಎಲ್ಲ ಹಿತನುಡಿಗಳನ್ನು ತಿರಸ್ಕರಿಸಿ ತಾವು ಸ್ವತಂತ್ರ ರಾಜರಾಗುವ ಛಲಹಿಡಿದಿದ್ದ ಅವರು ಹಿಂದೀ ಸೈನ್ಯವನ್ನು ತಡೆಗಟ್ಟುವದು ಅಸಾಧ್ಯವೆಂದು ಕಂಡೊಡನೆ ಎಳ್ಳಷ್ಟೂ ಹಿಂದೆಮುಂದೆ ನೋಡದೆ ಶರಣಾಗತರಾದರು. ಹೋರಾಟದ ನಟನೆಯನ್ನು ಕೂಡ ಅವರು ಹೆಚ್ಚು ಹೊತ್ತು ಮಾಡಲಿಲ್ಲ. ಪಶ್ಚಾತ್ತಾಪವನ್ನು ನಾಚಿಕೆಯಿಲ್ಲದೆ ವ್ಯಕ್ತಗೊಳಿಸಿದರು. ಯಾರನ್ನು ನಂಬಿ ಇಷ್ಟು ದಿನ ಹಾರಾಡಿದ್ದರೋ ಆ ರಜವಿಯನ್ನು ನಮ್ಮ ಸೈನ್ಯಾಧಿಕಾರಿಗೆ ತಂದೊಪ್ಪಿಸಿದರು. ಇದು ಒಳ್ಳೆಯದೇ ಆಯಿತು, ರಕ್ತಪಾತ ತಪ್ಪಿತು, ತಡವಾಗಿಯಾದರೂ ನಿಜಾಮರಿಗೆ ಬುದ್ಧಿಬಂತು ಎಂದು ನಾವು ಸಂತೋಷಪಡಬಹುದು. ಆದರೆ ನಿಜಾಮರ ಆಚರಣೆಯ ಅರ್ಥ ಇಷ್ಟು ಸರಳವಾಗಿದೆಯೆ? ಅವರನ್ನು ಇನ್ನಾದರೂ ನಾವು ನಂಬಬಹುದೆ?

ಹಾಗೆ ನಂಬಲು ಆಧಾರಗಳಿಲ್ಲ. ರಜವಿಯನ್ನು ಬಲಿಗೊಟ್ಟು, ತಮ್ಮ ಹಿಂದಿನ ಮಂತ್ರಿಮಂಡಲವನ್ನು ಉರುಳಲ್ಲಿ ಸಿಗಿಸಿ ತಾವು ಉಳಿದುಕೊಳ್ಳಬೇಕೆಂದು ಅವರ ಹಂಚಿಕೆಯಿದ್ದಂತೆ ತೋರುತ್ತದೆ. ಇತ್ತೆಹಾದುಲ್ ಮುಸ್ಲಿಮೀನ್ ಪಕ್ಷ, ರಜಾಕಾರ ಅತಿರೇಕವಾದಿಗಳು ಇವರ ಕೈಯಲ್ಲಿ ತಾವು ಸಿಕ್ಕಿಬಿದ್ದುದ್ದು ನಿರುಪಾಯರಾಗಿ ಅವರು ಹೇಳಿದಂತೆ ಕುಣಿಯಬೇಕಾಯಿತೆಂದು ತೋರಿಸಲು ಅವರು ಹವಣಿಸುತ್ತಿರಬೇಕು. ಆದರೆ ಮುಸ್ಲಿಮರ ದುರಹಂಕಾರ, ಹಿಂದುಗಳ ಮೇಲೆ ದಬ್ಬಾಳಿಕೆ ಇವೆಲ್ಲವೂ ಹಿಂದಿನ ನಿಜಾಮರಿಗಿಂತ ಈ ನಿಜಾಮರ ಆಳಿಕೆಯಲ್ಲೇ ಹೆಚ್ಚಾಗಿ ಬೆಳೆದು ಬಂದವೆಂಬದನ್ನು ನಾವು ಮರೆಯಕೂಡದು. ಮುಸ್ಲಿಮರನ್ನಾ

### ಸಂಸ್ಥಾನ ರಾಜಕಾರಣೆಯಿಂದ

ದರೂ ಉದ್ಧರಿಸಲು ಅವರು ಬಯಸುತ್ತಿದ್ದರೆಂದಲ್ಲ. ಅವರನ್ನು ಕುರಿದುಂಬಿಸಿ ಪ್ರಜಾತಂತ್ರವನ್ನು ನಿರ್ನಾಮಮಾಡಲು ನಿಜಾಮರು ಈ ಆಟ ಹೂಡಿದ್ದರು. ನಿಜಾಮರು ರಜವಿಯ ಕೈಗೊಂಬೆಯಾಗಿದ್ದರೆನ್ನುವದಕ್ಕಿಂತ ಅವನೇ ಅವರ ಕೈಗೊಂಬೆಯಾಗಿದ್ದನೆಂದು ನಂಬಲು ಹೆಚ್ಚು ಕಾರಣಗಳಿವೆ. ಆದುದರಿಂದ ಈ ವರೆಗೆ ಹೈದರಾಬಾದಿನಲ್ಲಿ ನಡೆದ ಘಟನೆಗಳಿಗೆ ನಿಜಾಮರು ಅವರ ಮಂತ್ರಿಗಳು ಮತ್ತು ರಜಾಕಾರರು ಎಷ್ಟೆಷ್ಟು ಹೊಣೆಗಾರರೆಂಬ ಬಗ್ಗೆ ಸಂಪೂರ್ಣ ವಿಚಾರಣೆಯಾಗಿ ನಿಜಾಮರು ನಿರ್ದೋಷಿಯಾಗಿ ಹೊರಬರುವ ತನಕ ಅವರ ಕೈಯಲ್ಲಿ ಲೇಶವಾದರೂ ಅಧಿಕಾರವನ್ನುಳಿಸುವದು ವಿಹಿತವಲ್ಲ.

### ವಿದೇಶಿ ಸಂಬಂಧ ಕೂಡದು

ಈ ಸಂಬಂಧದಲ್ಲಿ ಇನ್ನೊಂದು ಮಾತನು ನಾವು ಗಮನಿಸಬೇಕು. ನಿಜಾಮರಿಗೆ ಈ ದೇಶದ ಹೊರಗಿನ ಮಿತ್ರರು ಅನೇಕರಿದ್ದಾರೆ. ನಿಜವಾಗಿ ಭಾರತದ ಸ್ವಾತಂತ್ರ್ಯಕ್ಕೆ ಯಾರು ಯಾರು ಅಡ್ಡಗಾಲು ಹಾಕುತ್ತ ಬಂದಿದ್ದರೋ ಅವರೆಲ್ಲರ ಸಖ್ಯವನ್ನು ನಿಜಾಮರು ಸಂಪಾದಿಸಿದ್ದಾರೆ. ವಿದೇಶಗಳಲ್ಲಿದ್ದ ತಮ್ಮ ಪ್ರತಿನಿಧಿಗಳ ಮೂಲಕ ಈ ಭಾರತವಿರೋಧಿ ಸಕ್ತಿಗಳೊಡನೆ ಒಳಸಂಚು ನಡೆಸಿ ನಿಜಾಮರು ಜಗತ್ತಿನ ಮುಂದೆ ಭಾರತದ ಕೀರ್ತಿಗೆ ಕಪ್ಪು ಬಳಿಯುವ ಕಾಯಕವನ್ನು ಸಾಗಿಸಿದರು. ಆದುಕಾರಣ ನಿಜಾಮರ ಭವಿತವ್ಯ ನಿಶ್ಚಿತವಾಗಿ ನಿರ್ಧರಿಸಲ್ಪಡಲಿ, ಪಾಕಿಸ್ತಾನ ವಾದಿಯಾಗಿ ಯಾವದೊಂದು ವಿದೇಶದೊಡನೆಯೂ ಯಾವ ತೆರನಾದ ಸಂಬಂಧವನ್ನೂ ಇಟ್ಟುಕೊಳ್ಳಲು ನಾವು ಅವರಿಗೆ ಅವಕಾಶವನ್ನು ಕೊಡಕೂಡದು. ಕೊಟ್ಟರೆ ಒಂದಲ್ಲ ಒಂದು ದಿನ ನಮಗೆ ಮುಳುವಾಗದಿರದು.

ವಿದೇಶೀಯರ ಸಂಬಂಧದಲ್ಲಿ ಮಾತು ತೆಗೆದಾಗ ಇನ್ನೆರಡು ವಿಷಯಗಳು ಜ್ಞಾಪಕಕ್ಕೆ ಬರುತ್ತವೆ. ನಿಜಾಮರ ಸೈನ್ಯದಲ್ಲಿರುವ ಬ್ರಿಟಿಶ, ಅರಬ ಮೊದಲಾದ ವಿದೇಶೀಯರದೊಂದು, ಮತ್ತು ಅವರ ಇತರ ವಿದೇಶೀ "ಸಲಹೆಗಾರ"ರದೊಂದು. ನಿಜಾಮ ಸರಕಾರದ ಅಂತರಿಕ ಆಡಳಿತೆಗೆ ಬೇಕಾದ ಯಾವುದೇ ಬಲದಲ್ಲಿ ಒಬ್ಬನೂ ವಿದೇಶೀಯನು ಭಾರತ ಸರಕಾರದ ಸ್ಪಷ್ಟ ಸಮ್ಮತಿಯಿಲ್ಲದೆ ಇರತಕ್ಕದ್ದಲ್ಲ. ಈಗಿರುವವರನ್ನು ನಿದಾಕ್ಷಿಣ್ಯವಾಗಿ ಹೊರದೂಡಬೇಕು. ಸಲಹೆಗಾರರು ಬೇಕೆನಿಸಿದರೆ ನಿಜಾಮ ಸರಕಾರ ಭಾರತ ಸರಕಾರದಿಂದಲೇ ಪಡೆಯಬೇಕು

ದೇಶದ ಭವಿತವ್ಯ

[illegible]

ನಿಜಾಮರು ವಂಶಕ್ಕೇ ಉಸಾಬರಿ?

ಗಳೂ ಸಲಹೆಸೂಚನೆಗಳೂ ಮುಂದೆ ಬರುತ್ತಿವೆ. ಈಗಿನ ನಿಜಾಮರ ಪದಚ್ಯುತಿ ಬಹಳ ಮಟ್ಟಿಗೆ ನಿರ್ಣಯವಾದಂತೆಯೇ ಆಗಿದೆ. ಅವರ ತಪ್ಪಿನ ಸ್ವರೂಪ ಹೇಗೆಯೇ ಇರಲಿ, ಅವರು ಆಳಲು ಅಯೋಗ್ಯರೆಂಬಲ್ಲಿ ಸಂದೇಹ ಉಳಿದಿಲ್ಲ. ಅವರು ಹೋಗಲೇಬೇಕು. ಇದು ಅವರಿಗೂ ಚನ್ನಾಗಿ ಗೊತ್ತಿರುವಂತೆ ಕಾಣುತ್ತದೆ. ಇಡಿ ವಂಶವನ್ನೇ ತೆಗೆದುಹಾಕಿ ಹೈದರಾಬಾದನ್ನು ಒಂದು ಪ್ರತ್ಯೇಕ ಪ್ರಾಂತವಾಗಿ ಮಾಡಿ ಇಲ್ಲವೆ ಭಾಷಾನ್ವಯ ಪ್ರಾಂತಗಳಲ್ಲಿ ಹಂಚಿಹಾಕಿ ಸಮಸ್ಯೆಯನ್ನು ಇಲ್ಲದಂತೆ ಮಾಡಿಬಿಡಬೇಕೆಂಬ ಸೂಚನೆ ಬಂದಿದೆ. ನಿಜಾಮರ ಪುತ್ರರು ಉದಾತ್ತ ವಿಚಾರಗಳುಳ್ಳವರೆಂದು —ಬಹುಶಃ ಸ್ವಯಂ ನಿಜಾಮರೇ ದೂರದೃಷ್ಟಿಯಿಂದ ಕೇಲ ಬಿಟ್ಟ— ಪ್ರಚಾರವನ್ನು ಕೇಳುತ್ತೇವೆ. ನಿಜವಾದ ಅಧಿಕಾರದ ಎಲ್ಲ ಸಾಧನಗಳನ್ನು ಅವರಿಂದ ಕಸಿದುಕೊಂಡು ಪ್ರಜೆಗಳ ಸ್ವಾಧೀನ ಮಾಡಿದ ಬಳಿಕ ರಾಜವಂಶದ ಭವಿತವ್ಯವನ್ನು ನಿರ್ಣಯಿಸಬಹುದು.

ಹೈದರಾಬಾದಿನ ಪ್ರಜೆಗಳೇ ಈ ಎಲ್ಲ ಮಾತುಗಳನ್ನೂ ಅದರ ಸಂಗಡಲೇ ತಮ್ಮ ಭಾವೀ ರಾಜ್ಯಘಟನೆಯನ್ನೂ ನಿರ್ಧರಿಸಿಕೊಳ್ಳುವರೆಂದು ಭಾರತ ಸರಕಾರ ಆಶ್ವಾಸನ ಕೊಟ್ಟಿದ್ದರೂ ರಾಜಕೀಯ ದೃಷ್ಟಿಯಿಂದ ಹೈದರಾಬಾದ ಪ್ರಜೆಗಳಿನ್ನೂ ಶೈಶವಾವಸ್ಥೆಯಲ್ಲಿರುವರೆಂಬದೇ ನಿಜ. ಭಾರತದ ನಾಯಕರೇ ಅವರಿಗೆ ಸರಿಯಾದ ಮಾರ್ಗದರ್ಶನ ಮಾಡಿಸಬೇಕು. ಅದರಿಂದ ನಮ್ಮ ಹೊಣೆ ಇನ್ನಷ್ಟು ಹೆಚ್ಚಾಗಿದೆ.

### ದುಸ್ಸತ್ವಗಳು ನಿರ್ನಾಮವಾಗಬೇಕು

ಹೈದರಾಬಾದ ಪ್ರಜೆಗಳು ತಮ್ಮ ನಿರ್ಭಯವಾದ ಅಭಿಪ್ರಾಯವನ್ನು ವ್ಯಕ್ತಗೊಳಿಸಬೇಕಾದರೆ ಅಲ್ಲಿ ಶಾಂತಿ ಸುವ್ಯವಸ್ಥೆಗಳು ನೆಲೆ

—ಆರನೆಯ ಪುಟಕ್ಕೆ

ನಿಜಾಮರ ಮುಖ್ಯಮಂತ್ರಿ ಲಾಯಿಕ ಅಲ್ಲಿ
ಸೆರೆಮನೆಯಲ್ಲಿ

ಕಾಸೀಮ ರಜವಿ
ಕೆಂಪುಕೋಟೆಗೆ ಸ್ವಾಗತ?

# ವಿ ವಿ ಧ ಪ್ರ ಪಂ ಚ

## ಪ್ರಾರ್ಥನೆ

ಜಗತ್ತಿನಲ್ಲಿ ನೂರಕ್ಕೆ ೯೯ ಕ್ಕಿಂತ ಹೆಚ್ಚು ಜನರು ಅರಿವಿದ್ದು ಅಥವಾ ಇಲ್ಲದೆ ಭಾವಿಕ ಸ್ವಭಾವದವರಿದ್ದಾರೆ. ಅವರಿಗೆ ಪ್ರಾರ್ಥನೆಯಿಂದ ಬಹಳ ಲಾಭವಿದೆಯೆಂದು ತಜ್ಞರು ಹೇಳಿದ್ದಾರೆ. ಪರಲೋಕದ ಸುಖಕ್ಕೆ ಅದು ಸುಲಭ ಸೋಪಾನವೆಂಬುದನ್ನು ಹೊಸದಾಗಿ ಹೇಳಬೇಕಾಗಿಲ್ಲ. ಇಹಜೀವನದಲ್ಲಿ ಮನಸ್ಸಿಗೆ ಶಾಂತಿ, ಸಮಾಧಾನ, ಧೈರ್ಯಗಳನ್ನು ಅದು ಕೊಡಬಲ್ಲುದೆಂಬುದೇ ಇಲ್ಲಿ ಮುಖ್ಯವಾದುದು.

ದೇಹಕ್ಕೆ ವ್ಯಾಯಾಮ ದೊರೆತರೆ ಚೆನ್ನಾಗಿ ನಿದ್ದೆ ಬರುವಂತೆ ಮನಸ್ಸಿಗೆ ಸದ್ಭಾವನೆಯ ಚಿಂತನದಿಂದ ಶಾಂತಿ ದೊರಕುವುದೆಂಬುದು ಅನುಭವದ ಮಾತು. ಬಿಗಿಯಾದ ಮನಸ್ಸು, ಮುಚ್ಚಾಳಂಶಗಳನ್ನು ಪ್ರಾರ್ಥನಾ ನಿರ್ಭರ ಭಾವವು ಸಡಿಲಿಸಿ ಹಾಯೆನಿಸುವಂತೆ ಮಾಡುವುದು ಎಂದು ರೆವರೆಂಡ್ ಬ್ಲ್ಯಾಕ್ ವುಡ್ಡರು ಬರೆದಿರುವುದಾದರೂ ಈ ಅನುಭವದಿಂದಲೇ. ಪ್ರಾರ್ಥನೆಯೆಂದರೆ ಒಂದು ಮಾನಸಿಕ ಆರೋಗ್ಯಸೂತ್ರವೆಂದೂ ಅದಕ್ಕೆ ಬಾಹ್ಯಾಚರಣೆ ಸಂಸ್ಕೃತಿ ಭೇದದನ್ವಯ ಭಿನ್ನವಿರಬಹುದೆಂದೂ ಅವರ ಮತ. ಅಂದರೆ, ಪ್ರಾರ್ಥನೆಯ ಸ್ಥಳ, ಕಾಲ, ರೂಪ, ಅಂಗವಿನ್ಯಾಸ ಮುಂತಾದವು ವ್ಯಕ್ತಿಯ ರೂಢಿ ಮತ್ತು ಪ್ರಕೃತಿಗಳಿಗನುಗುಣವಾಗಿ ವಿಶಿಷ್ಟವಿರಬಹುದು ಎಂದರ್ಥ. ಪ್ರಾರ್ಥನೆ ಕೇವಲ ಮಾನಸಿಕವಿರಬಹುದು, ಇಲ್ಲವೆ ವಾಚಿಕ ಮತ್ತು ಶಾರೀರಿಕ ಪ್ರಕಾಶನದಿಂದ ಕೂಡಿರಬಹುದು.

ಸುಖ ಸಿಕ್ಕಾಗ ಕೃತಜ್ಞತಾ ಭಾವದಿಂದಲೂ ದುಃಖದಲ್ಲಿ ಬಿದ್ದಾಗ ಅದನ್ನು ಸಹಿಸಿಕೊಳ್ಳುವ ಸ್ಥೈರ್ಯಭಾವದಿಂದಲೂ ಬಾಳುವ ಧೀರಶಾಂತ ಮನಸ್ಥಿತಿಯು ಪ್ರಾರ್ಥನಾ ಪರತೆಯಿಂದ ಲಭ್ಯವಾಗುವುದು ಎಂಬುದಕ್ಕೆ ಅಸ್ಸಿಸ್ಸಿಯ ಸೇಂಟ್ ಫ್ರಾನ್ಸಿಸ್ಸನ ಈ ಪ್ರಾರ್ಥನೆ ಒಳ್ಳೆಯ ಉದಾಹರಣೆಯಾಗಿದೆ:

"ಹಗೆಯಿದ್ದಲ್ಲಿ ಒಲವನ್ನು ಬಿತ್ತುವೆನು ಸಂಶಯವಿದ್ದಲ್ಲಿ ಶ್ರದ್ಧೆಯನ್ನು ನೆಡುವೆನು ನಿರಾಶೆಯಿರುವೆಡೆಯಲ್ಲಿ ಪ್ರತ್ಯಾಶೆಯನ್ನು ಸ್ಥಾಪಿಸುವೆನು; ಕತ್ತಲನ್ನು ಕಳೆದು ಬೆಳಕನ್ನು ಹರಿಯಿಸುವೆನು; ಚಿಂತೆಯನ್ನೋಡಿಸಿ ಸಂತಸವನ್ನು ಒದಗಿಸುವೆನು. ಓ ಜಗದೊಡೆಯ, ನನ್ನನ್ನು ನಿನ್ನ ಶಾಂತಿದೂತನನ್ನಾಗಿ ಮಾಡು.

"ನನಗೆ ಇತರರು ಸಂತೈಸಬೇಕಾದ ಸ್ಥಿತಿಯನ್ನು ಕೊಡಬೇಡ, ಓ ದಿವ್ಯ ಸ್ವಾಮಿ! ನನಗೆ ಇತರರನ್ನು ಸಂತೈಸುವ ಶಕ್ತಿಯನ್ನು ದಯಪಾಲಿಸು. ನನ್ನನ್ನು ಇನ್ನೊಬ್ಬರು ಅರಿತುಕೊಳ್ಳಬೇಕಾದ ಸ್ಥಿತಿ ಬೇಡ; ಅವರನ್ನು ಅರಿತುಕೊಳ್ಳುವ ಶಕ್ತಿಯನ್ನು ನನಗೆ ಕೊಡು. ನನ್ನನ್ನು ಇನ್ನೊಬ್ಬರು ಪ್ರೀತಿಸಬೇಕೆಂದಿಲ್ಲ; ನನಗೆ ಅನ್ಯರನ್ನು ಪ್ರೀತಿಸುವ ಬಲವನ್ನು ಕರುಣಿಸು— ಏಕೆಂದರೆ, ಕೊಡುವುದರಲ್ಲಿ ನಾವು ಪಡೆದುಕೊಂಡೆವು, ಕ್ಷಮಿಸುವುದರಲ್ಲಿ ಕ್ಷಮಿಸಲ್ಪಡುವೆವು, ಸಾಯುವುದರಲ್ಲಿ ಶಾಶ್ವತ ಜೀವನಕ್ಕಾಗಿ ಹುಟ್ಟುವೆವು."

## ರೇಲ್ವೆ ರೇಡಿಯೋ

ಅಮೇರಿಕದ ಜರ್ಸಿ ನಗರದಲ್ಲಿ ನ್ಯೂಯಾರ್ಕ್ ಚಿಕಾಗೋಗಳ ಮುಖ್ಯ ಮಾರ್ಗದ ನಡುವೆ ೩೦೫ ಮೈಲಿನ ಪ್ರದೇಶದಲ್ಲಿದ್ದ ಏರಿ ರೈಲು ರಸ್ತೆಯವರು ಪ್ರಯಾಣಿಕ ಮತ್ತು ವಸ್ತುವಾಹಕ ರೈಲುಗಳು ತಡವಾಗಿ ಬರುವದನ್ನೂ ಅಪಾಯಕ್ಕೀಡಾಗುವದನ್ನೂ ತಪ್ಪಿಸುವಂತೆ ಚತುರ್ಮುಖವಾದ ಒಂದು ಹೊಸ ರೇಲ್ವೆ ರೇಡಿಯೋ ಪದ್ಧತಿಯನ್ನು ರಚಿಸಿದ್ದಾರೆ. ಇದಕ್ಕೆ ೧೪ ನಿಲ್ದಾಣಗಳಲ್ಲಿ ವಾಹಕಗನ್ನಿಡಲಾಗಿದೆ. ಇದರಿಂದ ಹೋಗುವ ರೈಲು ಮತ್ತು ದಾರಿಯಲ್ಲಿರುವ ನಿಲ್ದಾಣಗಳ ನಡುವೆ ಸ್ಥಳೀಯ ವಾಹನ ಮತ್ತು ಹಡಗುಗಳ ಮಧ್ಯ ಸ್ವತಃ ನಿಲ್ದಾಣಗಳ ನಡುವೆ ರೇಡಿಯೋ ಪದ್ಧತಿಯಿರುವ ಪ್ರದೇಶದಲ್ಲಿ ಆಗಿಂದಾಗ ಯಾವ ಸಂಗತಿಯನ್ನು ಬೇಕಾದರೂ ತಿಳಿಸಲು ಬರುತ್ತದೆ. ಇಡೀ ರೈಲು ಮಾರ್ಗಕ್ಕೆ ಈ ಸೌಕರ್ಯವನ್ನು ಒದಗಿಸಿಕೊಡಬೇಕೆಂದು ವಿಚಾರ ಮಾಡಲಾಗುತ್ತಿದೆ.



**ಬ್ರಿಟನ್ನಿನ ಅತ್ಯಂತ ದೊಡ್ಡದಾದ ವಿಮಾನ!** ಇದರ ತೂಕ ೧೩೫ ಟನ್. ಇದು ಯುರೋಪಿನಲ್ಲೆಲ್ಲ ಅತಿದೊಡ್ಡದು. ಅದರ ಪೆಟ್ರೋಲ್ ಟ್ಯಾಂಕು ೧೪೫೦೦ ಗ್ಯಾಲನ್ ಹಿಡಿಸುತ್ತದೆ. ಅದರಲ್ಲಿ ೧೦೦ ಜನರು ಪ್ರವಾಸಮಾಡಬಹುದು. ಅದರ ಬೆಲೆ ೭,೯೫,೦೦,೦೦೦ ರೂಪಾಯಿಗಳು!

## ಹೊಸ ಬಗೆಯ ವಿದ್ಯುದ್ದೀಪ

ಸಿಡ್ನಿಯ ಶ್ರೀ ಪೆಟ್ರಿಕ್ ಎಡ್ವರ್ಡ ರಾಸ್ ಗ್ರೇವರು ಹೊಸ ಬಗೆಯ ವಿದ್ಯುದ್ದೀಪವೊಂದನ್ನು ನಿರ್ಮಿಸಿದ್ದಾರೆ. ಮನೆ, ಕಾರ್ಯಾಲಯ ಮತ್ತು ಅಂಗಡಿಗಳಲ್ಲಿ ಬಳಸುವ ಶಕ್ತಿಯು ಒರೆಯುಂತಿರುವ ವಿದ್ಯುದ್ದೀಪಗಳಲ್ಲಿ ಒಂದಕ್ಕೆ ಬದಲು ೨ ಬೇರೆಬೇರೆ ಜ್ವಲನ ಶಕ್ತಿಯ ಬತ್ತಿಗಳನ್ನು ಆ ಹೊಸ ದೀಪದಲ್ಲಿ ಅಳವಡಿಸಲಾಗಿದೆ. ಇದರಿಂದ ಗುಂಡಿ ಒತ್ತುವ ಮಾತ್ರದಿಂದ ಒಂದು ಬತ್ತಿಯಿಂದ ಇನ್ನೊಂದಕ್ಕೆ ದೀಪವನ್ನು ಬೇಕಾದಾಗ ವರ್ಗಾಯಿಸಲು ಬರುವಂತೆ ಮಾಡಲಾಗಿದೆ.

ಭಾಷಣಮಂದಿರಗಳ ಪ್ರೇಕ್ಷಕಸ್ಥಾನ, ನೃತ್ಯಾಲಯ, ಉಗ್ರಾಣ, ರೋಗಿಗಳ ಕೋಣೆ, ಶಿಶುಸಂಗೋಪನಾಲಯ ಮುಂತಾದವುಗಳಲ್ಲಿ ಹೀಗೆ ಹೆಚ್ಚು ಕಡಿಮೆ ಪ್ರಕಾಶಗಳ ದೀಪವಿರುವದು ಬಹಳ ಉಪಯೋಗಕರ.

## ಉಣ್ಣೆಯ ವ್ಯಾಪಾರ

೧೯೫೭ ರ ಜಾಗತಿಕ ಉಣ್ಣೆಯ ವ್ಯಾಪಾರ ೩೩೭೫ ಕೋಟಿ ರೂಪಾಯಿಗಳಷ್ಟಾಗಿದೆ. ೧೯೫೬ ಕ್ಕಿಂತ ೬೭೫ ಕೋಟಿ ರೂಪಾಯಿಗಳ ವ್ಯಾಪಾರ ಕಡಿಮೆಯಾಯಿತು. ೧೯೩೫–೩೯ ರ ಸರಾಸರಿಗಿಂತ ೨೭೦ ಕೋಟಿ ರೂಪಾಯಿಗಳಷ್ಟು ಹೆಚ್ಚಾಗಿದೆ ಎಂದು ಅಮೇರಿಕದ ಸಂಯುಕ್ತ ಸಂಸ್ಥಾನದ ಒಕ್ಕಲುತನದ ಶಾಖೆ ಪ್ರಕಟಿಸಿದೆ.

ಪೂರಯಿಕೆಯ ದೊಡ್ಡ ನಾಡುಗಳಲ್ಲಿ ಶಿಲುಕಿರುವುದು ಮತ್ತು ಬಳಕೆಗಾರ ನಾಡುಗಳಲ್ಲಿ ಕೇಳಿಕೆ ಹೆಚ್ಚಾಗಿರುವುದು ಯುದ್ಧೋತ್ತರ ಕಾಲದ ವ್ಯಾಪಾರೋತ್ಕರ್ಷದ ಕಾರಣ. ಐರೋಪ್ಯ ನಿರ್ಗಮನ ಮಾರ್ಗಗಳನ್ನು ತೆರೆದಂದಿನಿಂದ ಸಕ್ಕದ ಗಿರಣಿಯ ಚಟುವಟಿಕೆಗಳಿಗೆ ಕೆಲ ಮಟ್ಟನ! ಎಣ್ಣೆ ಅಗತ್ಯವೆನಿಸಿದೆ. ಯೋಗ್ಯ ಮಟ್ಟದ ಕೊಡು-ಕೊಳುಗಳ ಶಿಲುಕಿಗೂ ಅದರ ಅಗತ್ಯ ಹೆಚ್ಚಾಗಿದೆ. ಆಸ್ಟ್ರೇಲಿಯ, ಅರ್ಜೆಂಟೀನಾ, ನ್ಯೂಜಿಲೆಂಡ್, ದಕ್ಷಿಣ ಆಫ್ರಿಕದ ಒಕ್ಕೂಟ ಮತ್ತು ಉರುಗ್ವೆಗಳು ಮುಖ್ಯವಾದ ಪೂರಯಿಕೆಯ ನಾಡುಗಳು. ಅಮೇರಿಕದ ನಾಗರಿಕರ ಕೇಳಿಕೆಗಳನ್ನು ಪೂರಯಿಸಲು ಅಲ್ಲಿಯ ಗಿರಣಿ ಮತ್ತು ಕಾರಖಾನೆದಾರರು ಎಲ್ಲರಿಗಿಂತ ಹೆಚ್ಚಾಗಿ ಉಣ್ಣೆಯ ಗಿರಾಕಿಗಳಾಗಿದ್ದಾರೆ. ಸುಮಾರು ೮೪೯॥ ಕೋಟಿ ರೂಪಾಯಿಗಳ ಉಣ್ಣೆಯನ್ನು ಅವರು ೧೯೫೭ ರಲ್ಲಿ ತರಿಸಿಕೊಂಡರು.

## ಆಸ್ಟ್ರೇಲಿಯದ ಕಿರಾತರಾಜ

ಈ ೨೦ ನೆಯ ಶತಕದಲ್ಲಿ ಅಧ್ಯಕ್ಷರಿಗಲ್ಲದೆ ಅರಸರಿಗೆ ಸ್ಥಾನವಿಲ್ಲ. ಆದರೂ ಹಳೆಯ ಕಾಲದ ಪರಂಪರೆಯ ಅವಶೇಷವಾಗಿ ಅಲ್ಲಲ್ಲಿ ಅರಸ ಅರಸಿಯರು ಕಾಣಸಿಗುತ್ತಾರೆ. ಹಳೆಯತನದ ತವರೆನಿಸುವ ಆಸ್ಟ್ರೇಲಿಯದ ಉತ್ತರದ ತುದಿಯಲ್ಲಿರುವ ಕಾಡು ಜನರಲ್ಲಿ ಪೊಂಗನೆಂಬ ಅರಸನಿದ್ದಾನೆ. ಅವನ ಗೋತ್ರಕ್ಕೆ ಬಾಲಮುಮು ಎಂದು ಹೆಸರು. ವರ್ಣಯುದ್ಧದಲ್ಲಿ ಆಸ್ಟ್ರೇಲಿಯನ್ನರಿಗೆ ಕೈಕೊಟ್ಟು ಬಿಸಿತೋರಿಸಿದ ಹುಲಿ ಎಂದರೆ ಇವನೊಬ್ಬನೇ. ಇವನು ತನ್ನ ಬಾಲಮುಮು ಜನರೊಡನೆ ಬಂದು ಕಾರ್ಪೆಂಟೇರಿಯ ಕೊಲ್ಲಿಯ ಸನಿಹದಲ್ಲಿ ಒಮ್ಮೆ ಬಿಳಿಯರನ್ನು ಗುಂಪು ಗುಂಪಾಗಿ ನಾಮಶೇಷ ಮಾಡಿದ ವೀರ.

ಇಂದು ಪೊಂಗನು ನರೆಗೂದಲಿನ ದಯಾವಂತ ರಾಜವೃದ್ಧನೆನೆಸಿದ್ದಾನೆ. ಇವನು ತೊಗಟೆಯ ಮೇಲೆ ಬಣ್ಣದ ಚಿತ್ರ ಬರೆವಲ್ಲಿ ಹೆಸರಾಗಿದ್ದಾನೆ. ಅಲ್ಲಿನ ಬಹು ಪತ್ನೀಪುತ್ರರಿಂದ ಇವನ ಅರಮನೆ ತುಂಬಿದೆ. ಅತಿಥಿ ಸತ್ಕಾರದಲ್ಲಿ ಇವನು ಹೆಸರಾದವನು. ಪ್ರಾಚೀನ ಆರ್ಯರಲ್ಲಿ ಒಮ್ಮೆ ಇತ್ತೆಂದು ಕೇಳುವ ಸ್ವಸತೀದಾನ ಸತ್ಕಾರ ಕೂಡ ಅತಿಥಿಗೆ ಇವನ ಆಸ್ಥಾನದಲ್ಲಿ ಸಿಗುವುದಂತೆ!



ಅಂತಾರಾಷ್ಟ್ರೀಯ ಅಶ್ವ ಪ್ರದರ್ಶನದಲ್ಲಿ ೧೬ ವರ್ಷದ ಸಿಲ್ವಿಯಾ ಕಮ್ಮಿಂಗ್ಸಳು ಮಕ್ಕಳ ಕುದುರೆ ಹಾರಿಕೆಯ ಸ್ಪರ್ಧೆಯಲ್ಲಿ ಲಂಡನ್ನಿನಲ್ಲಿ ಗೆದ್ದ ದೃಶ್ಯ!

# ಜನಮನ

## ಸರಕಾರದವರು ಇತ್ತ ಗಮನವೀಯುವರೇ?

ಶಿವಮೊಗ್ಗಾ ಡಿಸ್ಟ್ರಿಕ್ಟ ಸಾಗರ ತಾಲೂಕ ಕಸಬಾ ಹೋಬಳಿ ನಾಡಕಲ್ಸಿ ಗ್ರಾಮದಲ್ಲಿ ಬಹಳ ವರ್ಷಗಳ ಹಿಂದೆ ಶಿಲ್ಪಕಲಾ ವಿದ್ಯೆಯಲ್ಲಿ ಪ್ರಖ್ಯಾತಿ ಪಡೆದ ಡಕಣಾಚಾರಿ ಮತ್ತು ಜಕಣಾಚಾರಿ ಇವರುಗಳಿಂದ ಕಟ್ಟಲ್ಪಟ್ಟಿರುವ ಪುರಾತನ ದೇವಸ್ಥಾನಗಳಾದ ಶ್ರೀ ಮಲ್ಲಿಕಾರ್ಜುನ ಮತ್ತು ನೀಲಕಂಠೇಶ್ವರ, ಅರ್ಧನಾರೀಶ್ವರ ಈ ಮೂರೇ ಮೂರು, ದೇವಸ್ಥಾನಗಳು ನೋಡುವದಕ್ಕೆ ಬಹು ರಮ್ಯವಾಗಿದ್ದು ಶಿಲ್ಪಕಲಾ ಚಾತುರ್ಯವನ್ನು ಇನ್ನೂ ನಿನ್ನೆ ಮೊನ್ನೆ ಕಟ್ಟಿದ ರೀತಿಯಲ್ಲಿ ತೋರುತ್ತವೆ.

ಇಂಥ ಪುರಾತನವಾದ ದೇವಾಲಯಗಳನ್ನು ನೋಡುವವರು ಕೇಳುವವರು ಸಹ ಇಲ್ಲದೆ ದಟ್ಟವಾದ ಕಾಡುಗಳು ಬೆಳೆದು, ಅವುಗಳ ಬೇರುಗಳು ದೇವಸ್ಥಾನಗಳ ತಳಪಾಯಗಳಲ್ಲಿ ಬಂದು ಕಟ್ಟಡದ ಕಲ್ಲುಗಳೆಲ್ಲವೂ ಸಡಿಲವಾಗಿ ಮೇಲ್ಕಂಡ ದೇವಸ್ಥಾನಗಳಿಗೆ ಅಪಾಯ ಸಂಭವಿಸುವ ಸಂದರ್ಭಗಳು ಅನೇಕವಿವೆ. ಹೀಗಿದ್ದಾಗ್ಯೂ ಈ ವರೆಗೂ ಯಾವ ಅಧಿಕಾರಿ ವರ್ಗದವರೇ ಆಗಲಿ ಊರಿನ ಪ್ರಮುಖರುಗಳೇ ಆಗಲಿ ದೇವಸ್ಥಾನದ ರಿಪೇರಿ ಮುಂತಾದ ಕೆಲಸಗಳ ಬಗ್ಗೆ ಗಮನಕೊಡದೇ ಇರುವುದು ಬಹಳ ಸೋಜಿಗವೆಂದರೆ ಅತಿಶಯೋಕ್ತಿಯಾಗಲಾರದು. ಆದರೂ ಮೇಲಧಿಕಾರಿಗಳು ಮತ್ತು ಘನ ಸರಕಾರದವರು ಈ ವಿಷಯದಲ್ಲಿ ಬಹಳ ಮುತುವರ್ಜಿಯನ್ನು ವಹಿಸಿ ಕೂಡಲೇ ಮೇಲ್ಕಂಡ ವಿಚಾರಗಳನ್ನು ಪರಿಶೀಲಿಸಿ ತೊಂದರೆಗಳೆಲ್ಲವನ್ನೂ ಹೋಗಲಾಡಿಸುವರಾಗಿ ನಂಬಿದ್ದೇನೆ.
—ಬಿ. ಕೃಷ್ಣರಾವ

## ಅತಿಥಿ ಸತ್ಕಾರವೂ ಅಚಾತುರ್ಯವೆ?

ಮಾನ್ಯರೆ,

'ಅತಿಥಿ ದೇವೋ ಭವ' ಎಂದು ನಮ್ಮ ಕನ್ನಡ ಜನರು ಹೊರದೇಶದಿಂದ ಬಂದವರೆಲ್ಲರಿಗೂ ಉದಾರಾಶ್ರಯ ಕೊಟ್ಟರು. ಅತಿಥಿಗೆ ಸಂಕೋಚವಾಗದಿರಲಿ ಎಂದು 'ಮನೆ ತಮ್ಮದೆ ಇದೆ' ಎಂದು ಹೇಳುವ ವಾಡಿಕೆಯೂ ಇತ್ತು. ಆ ಅತಿಥಿ ಸತ್ಕಾರವೇ ಅಚಾತುರ್ಯವಾಯಿತೇನೋ ಎನ್ನುವಂತೆ "ಮನೆ ನಮ್ಮದಾದ ಮೇಲೆ ನೀವೇಕೆ ಇಲ್ಲಿ? ಹೊರಬೀಳಿರಿ, ಇಲ್ಲವೆ ನಮ್ಮ ತೊತ್ತಾಗಿ ಬದುಕಿ ಬೇಕಾದರೆ" ಎಂದರು. 'ಅತಿಥಿಗಳು'— ಡೇರೆ ಹೊಕ್ಕ ಕಾರವಾನದ ಒಂಟೆಯಂತೆ ಇದು ದಂತಕಥೆ ಅಲ್ಲ. ಬೆಳಗಾವಿ ತಮ್ಮದೆಂದು ಸಾಧಿಸುವ ಮರಾಟಿಗರ ಮಹಾ ಜೊಂಬರಾಟ ವಾಸ್ತವ ಸಂಗತಿ.

ಹಳ್ಳಿಗಳಲ್ಲಿಯೂ ಕೆಲ ಜನ ಹೇಳುತ್ತಾರೆ ತಾವು ಮರಾಟಗರೆಂದು. ಅವರು ಆಡುವದನ್ನು ಕೇಳಿರಿ. "ಮಳಿ. ಕಾಲ ದಿವ.ಸ ಸಣ್ಣ ಪೋರೀಚೆ ಕಾಮತ ಕಳಸ ಕಳಸತ ಮಣಜೆ ಕಸ ಕಳಸಾಯಚನ್?" ಅಣೆ ಮಾಡಿ ಹೇಳಿದರೂ ಅವರು ಹೇಳುತ್ತಿದ್ದ ಮರಾಠಿ ಇದೇ.

ಮರಾಠಿಯ ಬಗ್ಗೆ ನಮಗೆ ದ್ವೇಷ, ಅಸೂಯೆ ತಿಲಮಾತ್ರವೂ ಇಲ್ಲ. ಆದರೆ ಪರದುಃಖ ಶೀತಲರಾಗಿ ಆಕ್ರಮಣಶೀಲವೃತ್ತಿಗೆ ಮೊದಲು ಮಾಡಿದರೆ ಕನ್ನಡ ಜನಕ್ಕೆ ಅದು ಸಹಿಸಲಿಕ್ಕಿಲ್ಲ.
—ರಾಮಚಂದ್ರ ಶೇಡಬಾಳ

## ಮದ್ರಾಸು ಹುಳಿಪುಡಿ

೧॥ ಪೌಂಡು ಕೊತ್ತುಂಬರಿ, ೧॥ ಪೌಂಡು ಕೆಂಪು ಮೆಣಸಿನಕಾಯಿ, ।।। ಪೌಂಡು ಉಪ್ಪು ।।। ಜೀರಿಗೆ, ।।। ಬೆಳ್ಳುಳ್ಳಿ ಬೇಳೆ, ೫ ತೊಲೆ ದಾಲಚಿನ್ನಿ ಮರಾಠಿ ಮೊಗ್ಗು ಮತ್ತು ಲವಂಗ, ।।। ಪೌಂಡು ಅರಿಸಿನ, ೫ ತೊಲೆ ಸಾಸಿವೆ, ಮತ್ತು ಸ್ವಲ್ಪ ಕರಿಜೀವಿನ ಸೊಪ್ಪು.

ಮೇಲಿನ ದ್ರವ್ಯಗಳನ್ನು ಚೊಕ್ಕ ಮಾಡಿ ಚೆನ್ನಾಗಿ ಕುಟ್ಟಿ ನುಣ್ಣಗೆ ಪುಡಿಮಾಡಬೇಕು. ಅನಂತರ ಅದನ್ನು ಬೆರಸಿ, ಗಾಳಿ ಹೊಗದ ಸೀಸೆಗಳಲ್ಲಿ ಹಾಕಿಡಬೇಕು. ಖಾರ ಕಡಿಮೆಯಿರಬೇಕೆನ್ನುವವರು ಸ್ವಲ್ಪ ಮೆಣಸಿನಕಾಯಿ ಕಡಿಮೆ ಹಾಕಬೇಕು. ಇದು ಹಸಿ ಮಸಾಲೆ ಮದ್ರಾಸಿನ 'ಸಾಂಬಾರ'ಗೆ ಹಾಕುವಂಥದು ಎಂದು ಶ್ರೀಮತಿ ಕಮಲಾ ಶಾಂತಿ ಬರೆಯುತ್ತಾಳೆ.

# ಹೈದರಾಬಾದದಲ್ಲಿ ಮಿಲಿಟರಿ ಗವರ್ನರರ ಆಳಿಕೆ

## ಇಸ್ಲಾಂ ರಾಷ್ಟ್ರ ಸ್ಥಾಪನೆಯ ಹೊಂಚು ಮಣ್ಣುಗೂಡಿತು

### ರಜ್ವಿ—ಲಾಯಕ ಅಲಿಯವರ ಕೈಗೊಂಬೆಯಾಗಿದ್ದ ನಿಜಾಮರಿಗೆ ಪಶ್ಚಾತ್ತಾಪ

ಶುಕ್ರವಾರ ತಾ. ೧೭ ರ ಸಂಜೆ ೫ಕ್ಕೆ ತಮ್ಮ ಸೈನ್ಯಕ್ಕೆ ಯುದ್ಧ ನಿಲ್ಲಿಸಲು ಆಜ್ಞೆಯನ್ನು ವಿಧಿಸಿ ಹೈದರಾಬಾದ ನಿಜಾಮರು ಶರಣಾಗತರಾದೆವೆಂದು ಆಕಾಶವಾಣಿಯಲ್ಲಿ ಹೇಳಿ ಈ ಸಂಗತಿಯನ್ನು ಹಿಂದುಸ್ಥಾನದ ಗವರ್ನರ ಜನರಲರಾದ ಶ್ರೀ ಚಕ್ರವರ್ತಿ ರಾಜಗೋಪಾಲಾಚಾರ್ಯರಿಗೆ ತಿಳಿಸಲಾಗಿದೆಯೆಂದೂ ಹೇಳಿದರು.

#### ಹಿಂದುಸ್ಥಾನ ಸರಕಾರದ ಉತ್ತರ

ಇದಕ್ಕೆ ಹಿಂದುಸ್ಥಾನದ ಗವರ್ನರ ಜನರಲರಾದ ರಾಜಗೋಪಾಲಾಚಾರ್ಯರು ಉತ್ತರ ಕಳಿಸಿ, ತಡವಾಗಿಯಾದರೂ ಈ ತೀರ್ಮಾನಕ್ಕೆ ಬಂದದ್ದಕ್ಕೆ ನಿಜಾಮರನ್ನು ಅಭಿನಂದಿಸಿದರು. ನಿಜಾಮ ಸರಕಾರವು ಯೋಗ್ಯವಾಗಿ ವರ್ತಿಸದೆ ವಿಷಯಗಳನ್ನು ಕಾರಣವಿಲ್ಲದೆ ಜಟಿಲಗೊಳಿಸಿದ್ದಕ್ಕೆ ವಿಷಾದ ವ್ಯಕ್ತಗೊಳಿಸಿದರು. ನಿಜಾಮರ ಪತ್ರವೂ ಆಕಾಶವಾಣಿಯ ಭಾಷಣವೂ ತಮ್ಮ ಸರಕಾರದಿಂದ ಒಳ್ಳೆ ಆಸ್ಥೆಯಿಂದಲೂ ದಕ್ಷತೆಯಿಂದಲೂ ಪರಿಶೀಲಿಸಲ್ಪಡುತ್ತಿದೆಯೆಂದೂ ಅರುಹಿದರು.

#### ಪಂ. ಜವಾಹರಲಾಲರ ಆಕಾಶವಾಣಿ

ಭಾರತದ ಮುಖ್ಯ ಪ್ರಧಾನರಾದ ಪಂ. ಜವಾಹರಲಾಲರು ತಾ. ೧೮ ರ ಸಂಜೆಗೆ ಆಕಾಶವಾಣಿಯಲ್ಲಿ ಹೈದರಾಬಾದದ ಬಗ್ಗೆ ಮಾತನಾಡಿ ಹೀಗೆ ಹೇಳಿದರು.

ಹಿಂದೀ ಸೈನ್ಯವು ಹೈದರಾಬಾದದಲ್ಲಿ ಶೌರ್ಯ, ಚಾತುರ್ಯ, ವೇಗ ಹಾಗೂ ತಾಳ್ಮೆಗಳಿಂದ ಸನ್ಮಾನ್ಯ ರೀತಿಯಲ್ಲಿ ತಮ್ಮ ಕಾರ್ಯ ನಿರ್ವಹಿಸಿದ್ದಕ್ಕಾಗಿ ನನಗೆ ಸಂತೋಷವಾಗಿದೆ. ಈ ಅಪೂರ್ವ ಜಯಕ್ಕೂ ಅತುಲ ಪರಾಕ್ರಮಕ್ಕೂ ಅವರನ್ನು ನಾನು ಅಭಿನಂದಿಸುತ್ತೇನೆ. ಈ ಪ್ರಸಂಗದಲ್ಲಿ ಹಿಂದೂ–ಮುಸಲ್ಮಾನರು ಸಂಯಮದಿಂದ ನಡೆದುಕೊಂಡದ್ದಕ್ಕೆ ನನಗೆ ವಿಶೇಷ ಆನಂದವಾಗಿದೆ.

ಇನ್ನು ಮುಂದೆ ಜಾತೀಯ ದ್ವೇಷದ ಮಾತ್ರ ಕೇಳಬರದಿರಲಿ. ನಾವು ಶಾಂತಿಪ್ರಿಯರು. ಯಾರೊಡನೆಯೂ ನಮಗೆ ಯುದ್ಧ ಬೇಡ. ಈ ಮಾತನ್ನು ನಾನು ಪುನಃ ಪುನಃ ಸಾರಿ ಹೇಳುತ್ತೇನೆ. ನಿನ್ನಿನ ವರೆಗೆ ನಮ್ಮ ದೇಶಬಾಂಧವರಾಗಿದ್ದು ಇಂದು ನಮ್ಮ ನೆರೆಯವರಾದ ಪಾಕಿಸ್ತಾನದ ಜನರು ಇಲ್ಲದ ಭಯ ಸಂಶಯ ಮೊದಲಾದವನ್ನು ಬದಿಗಿಟ್ಟು ಶಾಂತಿ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿ ಎಲ್ಲರಿಗೂ ಸುಖ ಕೊಡಲು ನಾನು ಅವರಿಗೆ ಬೇಡುತ್ತೇನೆ.

ಹೈದರಾಬಾದದ ಕಲ್ಯಾಣವೂ ಏಳಿಗೆಯೂ ಹಿಂದುಸ್ಥಾನದೊಡನೆ ಸಮರಸವಾಗಿ ನಡೆದುಕೊಳ್ಳುವದರಲ್ಲಿಯೇ ಇದೆ. ಇತಿಹಾಸ, ಭೂಗೋಲ, ಸಾಂಸ್ಕೃತಿಕ ಸಾಂಪ್ರದಾಯಗಳೇ ಈ ಮಾತಿಗೆ ಸಾಕ್ಷಿಯಾಗಿವೆ. ತಡವಾದರೂ ಆಗಲಿ, ನಿಜಾಮರು ಸರಿಯಾದ ಹೆಜ್ಜೆ ಹಾಕಿದ್ದಾರೆ. ಇದಕ್ಕಾಗಿ ಅವರನ್ನು ಅಭಿನಂದಿಸುತ್ತೇನೆ. ಹೈದರಾಬಾದದ ಭವಿತವ್ಯವು ಅಲ್ಲಿಯ ಜನರ ಇಚ್ಛೆಯ ಮೇರೆಗೆ ನಿರ್ಧರಿಸಲ್ಪಡುವದು.

ಹೈದರಾಬಾದದ ವಿರುದ್ಧ ಉಗ್ರ ಕ್ರಮ ಕೈಕೊಳ್ಳದೆ ಗತ್ಯಂತರವಿಲ್ಲದ ಸಂದರ್ಭವನ್ನೇ ನಿಜಾಮ ಸರಕಾರವು ಒದಗಿಸಿತು. ಈಗ ನಮಗೆ ವಿಜಯ ದೊರಕಿದ್ದು ನಮ್ಮ ಸೈನಿಕರು ಸಿಕಂದರಾಬಾದದಲ್ಲಿ ಬೀಡು ಬಿಟ್ಟಿದ್ದಾರೆ. ರಜಾಕಾರರ ಸಂಸ್ಥೆ ಅಕ್ರಮವೆಂದು ಸಾರಲಾಗಿದೆ. ಅದರ ವಿಸರ್ಜನೆಯ ಕಾರ್ಯವೂ ಭರದಿಂದ ನಡೆದಿದೆ. ನಮ್ಮ ಎದುರಿಗೆ ಅನೇಕ ಸಮಸ್ಯೆಗಳು ಎದ್ದಿದ್ದು ಹೈದರಾಬಾದ ಹಿಂದುಸ್ಥಾನ ಜನತೆಯ ಹಿತವನ್ನು ಲಕ್ಷಿಸಿಯೇ ಅವನ್ನು ಬಿಡಿಸುವ ಪ್ರಯತ್ನ ಮಾಡಲಾಗುವದು.

ಸದ್ಯಕ್ಕೆ ಹೈದರಾಬಾದವನ್ನು ಸೈನ್ಯಾಧಿಕಾರಿಗೆ ಒಪ್ಪಿಸಲಾಗುವದು. ಶಾಂತಿ ನೆಲೆಗೊಳ್ಳುತ್ತಲೇ ಹೈದರಾಬಾದದ ರಾಜ್ಯಘಟನೆಯನ್ನು ನಿರ್ಣಯಿಸಲು ಅಲ್ಲಿ ಘಟನಾ ಸಮಿತಿಯನ್ನು ನೇಮಿಸಲಾಗುವದು.

ಹೈದರಾಬಾದವು ಹಿಂದುಸ್ಥಾನದಿಂದ ಭಿನ್ನವಾದ ಘಟಕವೆಂದು ನಾವು ತಿಳಿದಿಲ್ಲ. ಇದನ್ನು ಎಷ್ಟೋ ಸಲ ಹೇಳಿದ್ದೇನೆ. ಅದನ್ನೇ ಮತ್ತೊಮ್ಮೆ ಹೇಳುತ್ತೇನೆ. ಹಿಂದುಸ್ಥಾನದ ಪ್ರಾಚೀನ ಪರಂಪರೆಯಲ್ಲಿ ಹಿಂದು–ಮುಸಲ್ಮಾನರಿಬ್ಬರೂ ಸಮಭಾಗಿಗಳು.

#### ಹಿಂದೀ ಸೈನ್ಯಾಧಿಕಾರಿಗಳ ಆಡಳಿತ

ಹೈದರಾಬಾದದ ಸೇನಾಪತಿಯಾದ ಮೇಜರ ಜನರಲ ಎಡ್ರೂಜರು ತಾ ೧೮ ರಂದು ಹೈದರಾಬಾದದಿಂದ ೫ ಮೈಲು ದೂರದಲ್ಲಿ ಹಿಂದೀ ದಲಪತಿಯಾದ ಮೇಜರ ಜನರಲ ಜೆ. ಎನ್ ಚೌಧರಿಯವರಿಗೆ ಶರಣಾಗತರಾದರು. ಹೈದರಾಬಾದ ಸೇನೆಯು ಶರಣಾಗತವಾದ ನಂತರ ಸಂಸ್ಥಾನದ ಆಡಳಿತವನ್ನು ಹಿಂದೀ ಸೈನ್ಯ ವಹಿಸಬೇಕೆಂದೂ ಅದಕ್ಕಾಗಿ ಮೇ. ಜ. ಜೆ. ಎನ್. ಚೌಧರಿಯವರನ್ನು ಹೈದರಾಬಾದದ ಮಿಲಿಟರಿ ಗವರ್ನರರನ್ನಾಗಿ ನೇಮಿಸಲಾಗಿದೆಯೆಂದೂ ಹಿಂದುಸ್ಥಾನದ ಕೇಂದ್ರ ಸರಕಾರದಿಂದ ಬಂದ ಆಜ್ಞೆಯನ್ನೂ ಶ್ರೀ ಕೆ. ಎಂ. ಮುನಶಿಯವರು ನಿಜಾಮರಿಗೆ ತಿಳಿಸಿದರು. ಅದರಂತೆ ಇಡೀ ಸಂಸ್ಥಾನವನ್ನು ಮಿಲಿಟರಿ ಗವರ್ನರರ ಆಡಳಿತಕ್ಕೆ ಒಪ್ಪಿಸಲಾಯ್ತು, ಶ್ರೀ ಮುನಶಿಯವರ ವಾಸಕ್ಕೆ ಆಕ್ಷೇಪವೆತ್ತಿದ, ಬ್ರಿಟಿಶ ರೆಸಿಡೆಂಟನು ಇರುತ್ತಿದ್ದ ರೆಸಿಡೆನ್ಸಿ ಭವನದಲ್ಲಿಯೇ ಮಿಲಿಟರಿ ಗವರ್ನರ ಚೌಧರಿಯವರು ತಮ್ಮ ಕಚೇರಿಯನ್ನು ಸ್ಥಾಪಿಸಿದ್ದಾರೆ. ಈ ಹೊಸ ಮಾರ್ಪಾಟಿನಿಂದ ಹೈದರಾಬಾದದ ಪ್ರಜೆಗಳಿಗೆ ಹಿಡಿಸಲಾರದ ಆನಂದವಾಗಿದೆ. ಎಲ್ಲಿ ನೋಡಿದಲ್ಲಿ 'ಜಯ ಹಿಂದ' 'ಜಯ ಜವಾಹರ' ಎಂಬ ಜಯ ಜಯಕಾರವು ಕೇಳಬರುತ್ತಿರುವದಾಗಿ ವರದಿಯಿದೆ.

ಲಾಯಕ ಅಲಿ ಮಂತ್ರಿ ಮಂಡಲದ ಮಂತ್ರಿಗಳನ್ನೆಲ್ಲ ಅವರವರ ಮನೆಗಳಲ್ಲಿಯೇ ಬಂಧಿಸಿಡಲಾಗಿದೆ. ಹೈದರಾಬಾದ ಸಿಕಂದರಾಬಾದಗಳಲ್ಲಿ ಕರ್ಫ್ಯೂ ಆಜ್ಞೆ ಜಾರಿ ಮಾಡಲಾಗಿದೆ. ಎಲ್ಲ ಶಸ್ತ್ರಾಸ್ತ್ರಗಳನ್ನೂ ತಂದೊಪ್ಪಿಸಬೇಕೆಂದು ವಿಧಿಸಲಾಗಿದೆ. ರಜಾಕಾರರನ್ನು ಶೋಧಿಸಿ ರಜಾಕಾರರನ್ನೂ ಇತರರನ್ನೂ ಬಂಧಿಸಲಾಗುತ್ತಿದೆ.

#### ಗವರ್ನರರ ರಾಯಸ

ಮಿಲಿಟರಿ ಗವರ್ನರ ಚೌಧರಿಯವರು ಹಿಂದೀ ಸೈನಿಕರ ಕರ್ತವ್ಯ ದಕ್ಷತೆಗೆ ಮೆಚ್ಚುಗೆ ತೋರಿ, ಇನ್ನೂ ಅವರ ಕಾರ್ಯ ಮುಗಿದಿಲ್ಲವೆಂದೂ ಹಿಂದು ಮುಸಲ್ಮಾನರೆಂಬ ಭೇದ ತೋರದೆ ಎಲ್ಲರಿಗೂ ನೆರವಾಗಿ ನಾಗರಿಕ ಶಾಂತಿ ಸುವ್ಯವಸ್ಥೆಯನ್ನು ಕಾಯಬೇಕಲ್ಲದೆ ಸಿವಿಲ್ ಅಧಿಕಾರಿಗಳೊಡನೆ ಸಹಕರಿಸಿ ವೈಯಕ್ತಿಕ ಸ್ವಾರ್ಥತ್ಯಾಗ ಮಾಡುವ ಪ್ರಸಂಗ ಬಂದರೂ ಹಿಂತೆಗೆಯಕೂಡದೆಂದೂ ಅವರು ಕರ್ತವ್ಯಚ್ಯುತರಾಗುವದಿಲ್ಲವೆಂಬ ಬಗ್ಗೆ ತಮಗೆ ವಿಶ್ವಾಸವಿದೆಯೆಂದೂ ಒಂದು ರಾಯಸ ಹೊರಡಿಸಿ ಹೇಳಿದ್ದಾರೆ.

#### ಧುರೀಣರ ಅಭಿಪ್ರಾಯಗಳು

ಹೈದರಾಬಾದ ವಿಮೋಚನೆಯಿಂದ ಇಂದು ಹಿಂದುಸ್ಥಾನಕ್ಕೆ ಸಂಪೂರ್ಣ ಸ್ವಾತಂತ್ರ್ಯ ಪ್ರಾಪ್ತಿಯಾದಂತಾಯ್ತೆಂದೂ ಹೈದರಾಬಾದ ಸ್ವಾತಂತ್ರ್ಯಕ್ಕಾಗಿ ತಮ್ಮ ಪ್ರಾಣವನ್ನು ಅರ್ಪಿಸಿದ ಸಾವಿರಾರು ರೈತರು, ವಿದ್ಯಾರ್ಥಿಗಳು ಕಾರ್ಯಕರ್ತರು. ಮಹಿಳೆಯರು ಇವರೇ ಮೊದಲಾದವರ ತ್ಯಾಗವನ್ನು ಗೌರವಿಸಲು ನನ್ನ ಬಾಯಿಂದ ಶಬ್ದಗಳೇ ಹೊರಡದಾಗಿವೆಯೆಂದೂ ಸ್ವಾಮಿ ರಮಾನಂದ ತೀರ್ಥರು ಉದ್ಗಾರ ತೆಗೆದಿದ್ದಾರಲ್ಲದೆ ಹೈದರಾಬಾದದ ಭವಿತವ್ಯವು ಜನತೆಯ ಕೈಯಲ್ಲಿಯೇ ಇರುವದೆಂದು ನುಡಿದಿದ್ದಾರೆ.

#### ನಿಜಾಮರು ಅರಮನೆಯಲ್ಲಿ

ನಿಜಾಮರು ತಲೆಮರೆಸಿಕೊಂಡು ಓಡಿ ಹೋಗುವರೆಂಬ ಸುದ್ದಿ ನಿರಾಧಾರವಾಗಿದೆ. ಅವರು ತಮ್ಮ ಅರಮನೆಯಲ್ಲಿಯೇ ಇದ್ದಾರೆ. ಅದರನ್ನು ಹಿಂದೀ ಸೈನಿಕರ ಕಾವಲಿನಲ್ಲಿರಿಸಿದೆಯೆಂಬ ಸಂಗತಿಯೂ ಸುಳ್ಳು. ಅವರ ಅಂಗರಕ್ಷಣೆಗೆ ಅವರ ಜನರೇ ಮೊದಲಿನಂತೆ ಇರುತ್ತಾರೆ ಎಂದು ಹಿಂದೀ ಸೈನ್ಯದ ವಕ್ತಾರನೊಬ್ಬನು ಹೇಳಿದನು. ನಿಜಾಮರು ಒಂದು ಫರ್ಮಾನ ಹೊರಡಿಸಿ, ಮಿಲಿಟರಿ ಗವರ್ನರ ಚೌಧರಿಯವರ ಆಜ್ಞೆಯನ್ನು ಅತ್ಯಂತ ನಿಷ್ಠೆಯಿಂದ ಪಾಲಿಸಿ ಸಂಸ್ಥಾನದಲ್ಲಿ ಶಾಂತಿ ಸುವ್ಯವಸ್ಥೆಯನ್ನು ನೆಲೆಗೊಳಿಸಲು ಅನುಕೂಲವಾಗುವಂತೆ ವರ್ತಿಸಬೇಕೆಂದು ತಮ್ಮ ಪ್ರಜೆಗಳಿಗೆ ಹೇಳಿದ್ದಾರೆ.

ಭದ್ರತಾ ಮಂಡಲದಲ್ಲಿ ನಿಜಾಮ ಪ್ರತಿನಿಧಿ ತನ್ನ ಹೇಳಿಕೆ ಕೊಟ್ಟನಂತರ ಸ್ವಲ್ಪ ಚರ್ಚೆಯಾಗಿ ಈ ತಂಟೆಯನ್ನು ಕೆಲ ದಿನಗಳ ವರೆಗೆ ಮುಂದೂಡಬೇಕೆಂದು ಬ್ರಿಟನ್ ಸೂಚಿಸಿತು. ಈ ಸೂಚನೆಯನ್ನು ಒಪ್ಪಿ ಹಾಗೆ ನಿರ್ಣಯಿಸಲಾಯಿತು.

ರಜಾಕಾರರಿಗೆ ಸೈನಿಕ ಶಿಕ್ಷಣಕೊಟ್ಟ ಕರ್ನಲ ಗುಲಾಮ ಮೋಯಿನುದ್ದೀನನನ್ನೂ ರಜಾಕಾರರ ಬೇರೆ ಆರು ಪ್ರಮುಖರನ್ನೂ ತಾ ೨೧ ರಂದು ಬಂಧಿಸಲಾಗಿದೆ. ಮೋಯಿನುದ್ದೀನನು ನಿಜಾಮ ಸೈನ್ಯಶಾಖೆಯ ನಿವೃತ್ತ ಅಧಿಕಾರಿಯಿದ್ದಾನೆ.

ನಿಜಾಮ ಸರಕಾರವು ಕಳೆದ ಡಿಸೆಂಬರ ೨೨ ರಿಂದ ಹಿಂದೀ ನಾಣ್ಯ ಚಲಾವಣೆಯ ಮೇಲೆ ನಿರ್ಬಂಧ ಹಾಕಿತ್ತು. ಅದನ್ನೀಗ ಕಿತ್ತೊಗೆಯಲಾಗಿದೆ. ನಿಜಾಮ ಸರಕಾರದ ದಿಲ್ಲಿ ಕರಾಚಿಗಳಲ್ಲಿಯ ಏಜಂಟ ಜನರಲರಿಗೂ ಲಂಡನದಲ್ಲಿಯ ಹಾಯ ಕಮಿಶನರರಿಗೂ ಇತರ ನಿಜಾಮ ಪ್ರತಿನಿಧಿಗಳಿಗೂ ತಮ್ಮ ಚಟುವಟಿಕೆಗಳನ್ನು ಕೂಡಲೆ ನಿಲ್ಲಿಸಿ ಬಿಡಬೇಕೆಂದು ಮಿಲಿಟರಿ ಗವರ್ನರರಾದ ಚೌಧರಿಯವರು ಆಜ್ಞಾಪಿಸಿದ್ದಾರೆ. ನಿಜಾಮರ ಅಪಾರವಾದ ಗುಪ್ತನಿಧಿಯು ಈ ವರೆಗೆ ಅಪವ್ಯಯವಾಗುತ್ತ ಬಂದಿದ್ದು ಅದರ ಬಗ್ಗೆ ಕೂಲಂಕಷವಾದ ಪರಾಮರ್ಶವಾಗಲಿದೆಯೆಂದು ತಿಳಿಯುತ್ತದೆ.

#### ಪಶ್ಚಾತ್ತಾಪದಗ್ಧ ನಿಜಾಮರು

ನಿಜಾಮರು ತಾ. ೨೩ ರಾತ್ರಿ ಮತ್ತೊಂದು ಆಕಾಶವಾಣಿಯ ಭಾಷಣ ಮಾಡಿದರು. ಅದು ಅವರ ಆಯುಷ್ಯದಲ್ಲಿ ಮಾಡಿದ ೨ ನೆಯ ಆಕಾಶವಾಣಿಯ ಭಾಷಣವಂತೆ. ಅವರ ಮಾತುಗಳೆಲ್ಲ ಪಶ್ಚಾತ್ತಾಪಪೂರಿತವಾಗಿವೆ. ಅವರ ಮಾತಿನ ಸಾರ ಹೀಗೆ.

ಲಾಯಕಅಲಿ ಮಂತ್ರಿಮಂಡಳವು ಪರದೇಶಗಳಿಗೆ ಕಳಿಸಿದ ಶಿಷ್ಟಮಂಡಲಿಗಳನ್ನೆಲ್ಲ ನಾನು ವಿಸರ್ಜಿಸಿಬಿಟ್ಟಿದ್ದೇನೆ. ಜಗತ್ತಿನ ಮುಸಲ್ಮಾನರು ಸ್ವಾರ್ಥಿಗಳ ಪ್ರಚಾರಕ್ಕೆ ಮೋಸ ಹೋಗಬಾರದು (ನೇರವಾಗಿ ಭದ್ರತಾಮಂಡಳಕ್ಕೆ ಹೈದರಾಬಾದದ ದೂರನ್ನು ಹಿಂತೆಗೆದುಕೊಳ್ಳಲು ಕೇಳಲಾಗಿದೆಯೆಂದು ನಿಜಾಮರು ತಿಳಿಸಿದ ವಾರ್ತೆಯೂ ಬಂದಿದೆ).

ಕಳೆದ ೮ ತಿಂಗಳು ನಾನು ರಜಾಕಾರರ ಮತ್ತು ಲಾಯಕ ಅಲಿಯವರ ಕ್ರೂರ ದಬ್ಬಾಳಿಕೆಯ ಆಡಳಿತಕ್ಕೆ ಸಿಕ್ಕು ಬಿದ್ದು ಅಸಹಾಯನಾಗಿದ್ದೆ. ಈ ಗುಂಪು ಕಾಶೀಂ ರಜವಿಯ ಧುರೀಣತ್ವದಲ್ಲಿ ಹಿಂದೂ ಜನರ ಮೇಲೆ ಅತ್ಯಾಚಾರ ಕೊಲೆ ಸುಲಿಗೆ ನಡೆಸಿ ಸಂಸ್ಥಾನದಲ್ಲಿ ಹಿಟ್ಲರ ಶಾಹಿಯನ್ನೇ ಸ್ಥಾಪಿಸಿ ನನ್ನನ್ನು ಮೂಲೆಗೆ ಕೂಡಿಸಿ ಬಿಟ್ಟಿದ್ದರು. ೧೦೦ ಕ್ಕೆ ೮೬ ರಷ್ಟು ಹಿಂದುಗಳಿರುವ ಹೈದರಾಬಾದ ಸಂಸ್ಥಾನದಲ್ಲಿ ಈ ಅತ್ಯಾಚಾರಿಗಳು ಮುಸ್ಲಿಂ ರಾಷ್ಟ್ರವನ್ನು ಸ್ಥಾಪಿಸಬೇಕೆಂಬ ಮಹತ್ವಾಕಾಂಕ್ಷೆ ಇಟ್ಟುಕೊಂಡಿದ್ದರು.

ಹಿಂದುಸ್ಥಾನ ಸರಕಾರದೊಡನೆ ಗೌರವಯುತ ಒಪ್ಪಂದಕ್ಕೆ ನಾನು ಸಿದ್ಧನಿದ್ದರೂ ಹಿಂದುಸ್ಥಾನ ಸರಕಾರದ ಸೂಚನೆಗಳನ್ನು ನಿರಾಕರಿಸಲು ನನ್ನನ್ನು ಒತ್ತಾಯಪಡಿಸಿದರು. ಆದರೆ ಕಡೆಗೆ ಹಿಂದೀ ಸೈನ್ಯವು ರಾಜಧಾನಿಯಿಂದ ೪೦ ಮೈಲು ದೂರದಲ್ಲಿರುವಾಗ ಇವರು ನನ್ನನ್ನು ನಡುನೀರಲ್ಲಿ ಕೈಬಿಟ್ಟು ಕಾಲಿಗೆ ಬುದ್ಧೀ ಹೇಳಿದರು. ಇವರು ತಂದು ಬಿಟ್ಟ ಗೂಂಡಾಗಿಗಳು ಸಂಸ್ಥಾನದಲ್ಲಿ ಇನ್ನೂ ಗೊಂದಲ ಹಾಕುತ್ತಿದ್ದಾರೆ. ಅವರನ್ನು ದಂಡಿಸಲು ಶಾಂತಿ ಸ್ಥಾಪಿಸಲು ನನ್ನ ಪ್ರಜೆಗಳು ಮಿಲಿಟರಿಗವರ್ನರರಿಗೆ ಸಂಪೂರ್ಣ ಸಹಕಾರ ನೀಡಬೇಕು.

"ಸದ್ಯಕ್ಕೆ ಸಿಕಂದರಾಬಾದದಲ್ಲಿ ೧೦ ಸಾವಿರ ಹಿಂದೀ ಸೈನಿಕರಿದ್ದು ಅವರು ಶಾಂತಿ ಸುವ್ಯವಸ್ಥೆ ಪ್ರಸ್ಥಾಪನೆ, ಜನರಲ್ಲಿ ಧೈರ್ಯ ಬರುವಂತೆ ಮಾಡುವದು, ಸಾರ್ವಜನಿಕ ಶಾಂತತೆಗೆ ಗಂಡಾಂತರಪ್ರಾಯರಾದ ಜನರನ್ನು ಬಂಧಿಸುವದು ಮೊದಲಾದ ಕಾರ್ಯದಲ್ಲಿ ನಿರತರಾಗಿದ್ದಾರೆ." ಕಾಸೀಮ ರಜವಿಯನ್ನು ಹೈದರಾಬಾದ ಸಂಸ್ಥಾನ ಗಡಿಯ ಆಚೆಗೆ ಒಯ್ಯಲಾಗಿದೆ ಎಂದು ಮುಂತಾಗಿ ಮಿಲಿಟರಿ ಗವರ್ನರರು ಪತ್ರಿಕಾ ಪ್ರತಿನಿಧಿಗಳಿಗೆ ಹೇಳಿದರು.

## ವ್ಯಾಪಾರ ಪ್ರಪಂಚ

### ಮುಂಬಯಿ ಶೇರ ಪೇಟೆ

ತಾ. ೨೩

ಭಾರತ ಸರಕಾರವು ಆತಿಕ್ರಮಣದ ವಿರುದ್ಧ ಕೈಕೊಳ್ಳಬಹುದಾದ ಕ್ರಮಗಳಿಂದ ಭೀತವಾದ ಪೇಟೆಯಲ್ಲಿ ಮಾರುವವರ ಜೋರಿನಿಂದಾಗಿ ಬೆಲೆಗಳು ಕುಸಿದವು. ಟಾಟಾ ಸ್ಟೀಲ ಪಾಲುಗಳಿಂದಾರಂಭಿಸಿ ಎಲ್ಲ ಪಾಲುಗಳೂ ಇಳಿದು ಹೋದವು. ಮುಂದೆ ಸ್ವಲ್ಪ ಸುಧಾರಿಸಿ ಇಂದು ಬೆಲೆಗಳು ಈ ಕೆಳಗಿನಂತೆ ಕೊನೆಗೊಂಡವು.

#### ಜವಳಿ

| | |
|---|---|
| ಅಹಮದಾಬಾದ ಅಡ್ವಾನ್ಸ | ೨೭೭–೮–೦ |
| ಬಾಂಬೆ ಡಾಯಿಂಗ್ | ೧೦೩೭–೫–೦ |
| ಸೆಂಟ್ರಲ ಇಂಡಿಯಾ | ೨೮೩–೦–೦ |
| ಗೋಕಾಕ | ೨೯೦–೮–೦ |
| ಕೋಹಿನೂರು | ೨೯೭–೮–೦ |
| ಫಿನಿಕ್ಸ | ೪೫೩–೧೨–೦ |
| ಸಿಂಪ್ಲೆಕ್ಸ | ೧೯೩–೦–೦ |
| ಸ್ವದೇಶಿ | ೩೦೦–೦–೦ |

#### ಇತರ

| | |
|---|---|
| ಬೇಲಾಪುರ ಸಕ್ಕರೆ | ೨೭೮–೦–೦ |
| ಬಾಂಬೇ ಬರ್ಮಾ | ೩೯೧–೧೪–೦ |
| ಸಿಂಧ್ಯ ಸ್ಟೀಮ | ೨೫–೫–೦ |
| ಟಾಟಾ ಸ್ಟೀಲ ಡೆಫರ್ಡ | ೧೫೪೨–೮–೦ |
| ಅಸೊ. ಸಿಮೆಂಟ್ಸ | ೧೬೫–೦–೦ |
| ಸೆಂಟ್ರಲ ಬ್ಯಾಂಕ್ | ೮೮–೦–೦ |
| ಇಂಪೀರಿಯಲ್ ಬ್ಯಾಂಕ ಪೂರ್ಣ | ೧೯೪೫.೦–೦ |
| ಇಂಡಿಯನ್ ಬ್ಯಾಂಕ | ೨೦೬.೦.೦ |
| ರಿಝರ್ವ ,, | ೧೧೩–೦–೦ |

#### ಚಿನ್ನ--ಬೆಳ್ಳಿ

ಶನಿವಾರಕಟ್ಟೆಯಲ್ಲಿಯೂ ಸರಕಾರದ ಹಣಕಾಸಿನ ಕ್ರಮಗಳ ಬಗ್ಗೆ ಶಂಕೆಯಿದ್ದುದರಿಂದ ಬೆಲೆಗಳು ಇಳಿದುಹೋದವು. ಇಂದಿನ ಬೆಲೆಗಳು ವಾರದ ಅತಿ ಕನಿಷ್ಠ ಮಟ್ಟದಲ್ಲಿ ಹೀಗಿದ್ದವು :

| | |
|---|---|
| ತಯಾರಿ ಚಿನ್ನ | ೧೧೩–೧೨–೦ |
| ತಯಾರಿ ಬೆಳ್ಳಿ | ೧೭೭–೧೪–೦ |
| ವಾಯದಾ ,, | ೧೬೮–೬–೦ |
| ಸಾವರಿನ | ೭೬–೮–೦ |

#### ಅರಳೆ

ಅರಳೆಯಲ್ಲಿ ವಾಯಿದಾ ವ್ಯಾಪಾರ ಪ್ರಾರಂಭವಾಗಿದ್ದು ಇಂದಿನ ದರಗಳು ಇಂತಿದ್ದವು.

| | |
|---|---|
| ಸೆಪ್ಟಂಬರ | ೫೯೮–೦–೦ |
| ಮಾರ್ಚ | ೫೮೨–೧೨–೦ |
| ಜೂನ | ೫೭೪–೧೨–೦ |
| ಸೆಪ್ಟೆಂಬರ | ೫೮೨–೦–೦ |

#### ಎಣ್ಣೆಕಾಳು

| | |
|---|---|
| ಶೇಂಗಾ | ೧೬೭–೪–೦ |
| ಅಗಸಿ | ೨೬–೧೨–೦ |
| ,, ಹೊಸ ಬೆಳೆ | ೨೭–೦–೦ |
| ಅಗಸಿ ಎಣ್ಣೆ | ೧೬–೪–೦ |

#### ಶಿವಮೊಗ್ಗೆ ಅಡಿಕೆ

ತಾ. ೨೨

| | |
|---|---|
| ದೇಶಾವರ ನಂ. ೧ ಮಣ ೧ ಕ್ಕೆ | ೨೭-೩೨ |
| ,, ,, ೨ | ೨೬-೨೮ |
| ,, ,, ೩ | ೨೦–೨೫ |
| ರಾಜಾಅಲವು | ೨೭–೩೦ |
| ಬೆಟ್ಟೆವಂತಿ | ೧೭.೧೯ |
| ಬೆಟ್ಟೆ | ೧೫-೧೭॥ |
| ಬೇಡಿಕೆ ಚನ್ನಾಗಿದೆ | – |

#### ಸಾಂಗಲಿ

| | |
|---|---|
| ಅರಸಿಣ ಹೊಸ (ಹೇರು) | ೧೩೩ |
| ಶೇಂಗಾ ಖಂಡಿ | ೧೩೦ |
| ಮೆಣಸಿನಕಾಯಿ ಹೊಸ ಹೆರು | ೧೭೫ |
| ಬೆಲ್ಲ ,, | ೩೦ |

#### ಹುಬ್ಬಳ್ಳಿ

ತಾ. ೨೩

| | |
|---|---|
| ಜ. ಹತ್ತಿ ನಗಕ್ಕೆ | ೩೫೦-೩೭೮ |
| ,, ಅರಳೆ ,, | ೨೬೦-೨೭೮ |
| ಜೋಳ (ಚೀಲಕ್ಕೆ) | ೩೯–೪೧ |
| ಬಿಳೆ ಗೋದಿ ಚೀಲ | ೮೦–೯೨ |
| ಕೆಂಪು ,, ,, | ೯೬–೧೦೪ |
| ಸಣ್ಣಕ್ಕಿ ,, | ೮೬–೯೦ |
| ದೊಡ್ಡಕ್ಕಿ ,, | ೭೫–೭೮ |
| ಕುಸುಬಿ ,, | ೩೦–೩೦॥ |
| ಶೇಂಗಾ ಹೇರು | ೩೮–೪೨ |
| ,, ಹೊಸ | ೨೨–೨ |

# ಕರ್ಮವೀರ

ಶ್ರೀಮಚ್ಛಾಲಿಶಕ್ಯ ವಿಕ್ರಮ ವರ್ಷ ೧೮೭೦
ಭಾದ್ರಪದ ಬ॥ ೯ ಸೋಮವಾರ

## ಅಭಿನಂದನೀಯ ಯಶಸ್ಸು

ಹಿಂದಿನ ಸರಕಾರವು ದಂಡೋಪಾಯವನ್ನು ಯೋಜಿಸಿದ ಐದೇ ದಿನಗಳಲ್ಲಿ ನಿಜಾಮರು ಶಸ್ತ್ರಗಳನ್ನು ಕೆಳಗಿಟ್ಟು ಶರಣು ಬಂದದ್ದು ಹಿಂದುಸ್ಥಾನ ಸರಕಾರದ ಸೈನ್ಯ ಶಾಖೆಯ ಯುದ್ಧಶಕ್ತಿಯನ್ನು ತೋರ್ಪಡಿಸುತ್ತದೆ. ಹಿಂದುಸ್ಥಾನ ಸರಕಾರದ ಸೈನ್ಯ ಶಾಖೆಯ ನೇತೃತ್ವದಲ್ಲಿ ಸಂಸ್ಥಾನದ ಆಡಳಿತವು ಈಗ ನಡೆದಿದ್ದು ಇಷ್ಟರಲ್ಲಿಯೆ ಸಂಸ್ಥಾನದಲ್ಲಿಯ ಆಯಾ ಜಿಲ್ಲೆಗಳ ಆಡಳಿತವು ಮುಲ್ಕಿ ಅಧಿಕಾರಿಗಳ ಮೂಲಕ ಸಾಗಹತ್ತುವದು.

ಹಿಂದುಸ್ಥಾನ ಸರಕಾರದವರು ಅತ್ಯಂತ ತಾಳ್ಮೆಯಿಂದ ಪರಿಸ್ಥಿತಿಯನ್ನೆಲ್ಲ ಸಹಿಸಿಕೊಂಡು ನಿಜಾಮರಿಗೆ ಪರಿಪರಿಯಾಗಿ ಉಪದೇಶಿಸಿ ಯುದ್ಧವಿಲ್ಲದೆ ಉದ್ದೇಶವನ್ನು ಸಾಧಿಸಿಕೊಳ್ಳಬೇಕೆಂದು ಬಗೆದರು. ಆದರೆ ಅದು ಸಾಧ್ಯವಾಗಲಿಲ್ಲ. ಎಂಟು ಹತ್ತು ತಿಂಗಳವರೆಗೆ ಸಂಸ್ಥಾನದಲ್ಲಿಯ ಅನೇಕ ಜನರು ಪುಂಡರ ಅನನ್ವಿತ ಛಲನೆಗೆ ತುತ್ತಾದರು. ಲಕ್ಷಗಟ್ಟಲೆ ರೂಪಾಯಿ ಬೆಲೆಯ ಆಸ್ತಿಪಾಸ್ತಿ ಹಾಳಾಗಿ ಹೋಯಿತು. ಆದರೀಗ ನಿಜಾಮ ಸಂಸ್ಥಾನದ ಆಡಳಿತವು ಹಿಂದುಸ್ಥಾನ ಸರಕಾರದ ಅಧೀನಕ್ಕೆ ಬಂದದ್ದರಿಂದ ಜನತೆಯ ಕಷ್ಟನಷ್ಟಗಳೆಲ್ಲ ಹಿಂಗಿದವು. ಶಾಂತಿಪ್ರಿಯ ಜನರೆಲ್ಲ ಇನ್ನು ಯಾವದೇ ಬಗೆಯ ಅಂಜಿಕೆ ಆಳಕುಗಳಿಲ್ಲದೆ ಇರಬಲ್ಲರೆಂದು ಹಿಂದುಸ್ಥಾನ ಸರಕಾರದ ಪರವಾಗಿ ಆಶ್ವಾಸನ ಕೊಡಲಾಗಿದೆ. ಇದರಿಂದ ಸಂಸ್ಥಾನದ ಪ್ರಜೆಗಳು ಹಿಂದಿನದನ್ನೆಲ್ಲ ಮರೆತು ಸುಖ ಸಮಾಧಾನಗಳಿಂದ ಸರಕಾರಕ್ಕೆ ನಿಷ್ಠರಾಗಿ ಜೀವನವನ್ನು ಸಾಗಿಸುವಂತಾಗಿದೆ. ಸಂಸ್ಥಾನ ಪ್ರಜೆಗಳ ಈ ಕಷ್ಟಪರಂಪರೆಯನ್ನು ಇಂತು ಹೋಗಲಾಡಿಸಿದ್ದಕ್ಕಾಗಿ ಹಿಂದುಸ್ಥಾನ ಸರಕಾರಕ್ಕೂ ಅತ್ಯಲ್ಪ ಕಾಲದಲ್ಲಿ ನಿಜಾಮರನ್ನು ಮಣಿಸಿ ವಿಜಯವನ್ನು ಸಂಪಾದಿಸಿದ್ದಕ್ಕಾಗಿ ರಾಜೇಂದ್ರಸಿಂಹಜಿಯವರ ಸೇನಾಪತ್ಯದಲ್ಲಿಯ ದಕ್ಷಿಣ ಸೈನ್ಯಪಡೆಗೂ ಅವರು ಕೃತಜ್ಞರಾಗಿರುವರು.

ನಿಜಾಮರಂತೂ ಶರಣು ಬಂದರು. ಮುಂದೇನು ಎಂದು ಕೇಳಲಾಗುತ್ತದೆ. ಸಂಸ್ಥಾನದಲ್ಲೆಲ್ಲ ಇಷ್ಟೊಂದು ಹತ್ಯಾಕಾಂಡ, ಸುಲಿಗೆ, ಕೊಳ್ಳಿಗೆ ಪ್ರತ್ಯಕ್ಷ ಅಪ್ರತ್ಯಕ್ಷ ರೀತಿಯಿಂದ ಕಾರಣರಾದ ನಿಜಾಮರ ಮತ್ತು ಅವರ ಬೆಂಬಲಿಗರ ಭವಿತವ್ಯವೇನು ಎಂಬ ಪ್ರಶ್ನೆ ಈಗ ಉದ್ಭವಿಸಿದೆ. ಈ ಬಗ್ಗೆ ಬೇರೆ ಬೇರೆ ಜನರು ಬೇರೆ ಬೇರೆ ಅಭಿಪ್ರಾಯವನ್ನು ವ್ಯಕ್ತಪಡಿಸುತಿರುವರು. ನಿಜಾಮರ ಅರಸೊತ್ತಿಗೆಯನ್ನು ನಷ್ಟಗೊಳಿಸಿ ಆಯಾ ಭಾಷಾನ್ವಯ ಪ್ರಾಂತಗಳಲ್ಲಿ ಅವರ ಪ್ರದೇಶವನ್ನು ವಿಲೀನಗೊಳಿಸಿ ಬಿಡಬೇಕೆಂದು ಪ್ರತಿಪಾದಿಸುವವರು ಹೆಚ್ಚು ಜನರು. ಹಿಂದುಸ್ಥಾನದಲ್ಲಿ ಹಲವಾರು ಸಂಸ್ಥಾನಿಕರನ್ನು ಇರಗೊಟ್ಟಿರುವಾಗ ನಿಜಾಮರನ್ನೇಕೆ ಪದಚ್ಯುತ ಮಾಡಬೇಕು, ತಾವು ಮಾಡಿದ ತಪ್ಪಿಗಾಗಿ ಅವರು ಸಾಕಷ್ಟು ಪಶ್ಚಾತ್ತಾಪಪಟ್ಟಿರುವರು; ಸಂಸ್ಥಾನದಲ್ಲಿ ಪ್ರಜಾಪ್ರಭುತ್ವವನ್ನು ಪ್ರಸ್ಥಾಪಿಸಿ ಅವರನ್ನೊಬ್ಬ ಘಟನಾತ್ಮಕ ಗವರ್ನರರನ್ನಾಗಲಿ ಅರಸರನ್ನಾಗಲಿ ಮಾಡಿ ಅವರ ಅರಸೊತ್ತಿಗೆಗೆ ಇಂತು ಕಡಿವಾಣ ಹಾಕಿ ಬಿಡಬಹುದು ಎಂದೂ ಅನೇಕರು ಅಭಿಪ್ರಾಯಪಡುತಿರುವರು. ಹಿಂದುಸ್ಥಾನ ಸರಕಾರದವರು ತಮ್ಮ ನಿರ್ಣಯವನ್ನು ಇನ್ನೂ ಸಾರಿರುವದಿಲ್ಲ. ಹೈದರಾಬಾದದ ಮೇಲೆ ದಂಡೋಪಾಯವನ್ನು ಕೈಕೊಳ್ಳುವಾಗ ಅವರು ಕ್ಷೇತ್ರವನ್ನು ಚೆನ್ನಾಗಿ ಹದಮಾಡಿಕೊಂಡಂತೆ, ನಿಜಾಮರ ಭವಿತವ್ಯವನ್ನು ನಿರ್ಣಯಿಸುವಾಗಲೂ ಎಲ್ಲವನ್ನು ಪರಿಪಡಿಸಿಕೊಂಡು ಯೋಗ್ಯಕ್ರಮವನ್ನು ಅವರು ಕೈಕೊಳ್ಳುವರೆಂಬಲ್ಲಿ ಸಂದೇಹವಿಲ್ಲ, ದುಷ್ಟನಿಗ್ರಹಶಿಷ್ಟಪರಿಪಾಲನದ ಭಾರತದ ಪರಂಪರೆಗೆ ತಕ್ಕರೀತಿಯಲ್ಲಿಯೇ ಹಿಂದುಸ್ಥಾನ ಸರಕಾರದವರು ವರ್ತಿಸುವರೆಂಬುದು ಸ್ಪಷ್ಟವಿದೆ. ನಿಜಾಮರ ಅರಸೊತ್ತಿಗೆಯನ್ನು ಇಟ್ಟರೂ ಅವರನ್ನು ನಿರ್ಮಾಲ್ಯ ಮಾಡಿ ಬಿಡುವರೆಂಬಲ್ಲಿ ಯಾರೂ ಸಂಶಯಪಡಬೇಕಿಲ್ಲ. ಏನೇ ಆದರೂ ಪಂಡಿತ ಜವಾಹರಲಾಲರು ಹೇಳಿದಂತೆ ನಿಜಾಮ ಸಂಸ್ಥಾನದಲ್ಲಿಯ ಪ್ರಜೆಗಳೇ ಅದರ ಭವಿತವ್ಯವನ್ನು ನಿರ್ಣಯಿಸಬಲ್ಲರೆಂಬುದು ಸುಸ್ಪಷ್ಟವಾಗಿದೆ. ಕೆಂಪು ಕೋಟೆಯ ಮೇಲೆ ನಿಜಾಮ ಶಾಹಿಯ ಧ್ವಜವನ್ನೇರಿಸಿ ಹಿಂದುಸ್ಥಾನದಲ್ಲೆಲ್ಲ ಇಸ್ಲಾಮ ರಾಜ್ಯ ಪ್ರಸ್ಥಾಪಿಸಬೇಕೆಂಬ ರಾಕ್ಷಸೀ ಮಹತ್ವಾಕಾಂಕ್ಷೆಯನ್ನು ತಾಳಿದ್ದ ಕಾಶೀಂ ರಜವಿ ಮತ್ತು ಲಾಯಕ ಅಲ್ಲಿ ಮೊದಲಾದವರಿಗೆ ಕೆಂಪು ಕೋಟೆಯ ದರ್ಶನ ಮಾಡಿಸಲಾಗುವದು. ಸಂಸ್ಥಾನದಲ್ಲೆಲ್ಲ ಮೊದಲು ಶಾಂತಿ ಸುವ್ಯವಸ್ಥೆಯನ್ನು ಸ್ಥಾಪಿಸಿ ಅನಂತರ ಅದರ ಭವಿತವ್ಯವನ್ನು ನಿರ್ಣಯಿಸುವದು ಯಥೋಚಿತವಾಗಿದೆ.

## ಹಿಂದ ಸೇನಾಪತಿಗೆ ನಿಜಾಮ ಸೇನಾಪತಿಯ ಸ್ವಾಗತ



ನಿಜಾಮರು ಇದೇ ೧೭ ಸೇ ತಾ. ಗೆ ಶರಣು ಬಂದ ನಂತರ ಅವರ ಸೇನಾಪತಿ ಎಲ್ ಎಡ್ರೂಜರು ಮರುದಿನ ಸಿಕಂದರಾಬಾದದಿಂದ ಐದು ಮೈಲಿನ ಮೇಲೆ ಹಿಂದೀ ಸೇನಾಪತಿ ಮೇ. ಜ. ಚೌಧರಿಯನ್ನು ಎದುರುಗೊಂಡು ಹಿಂದೀ ಸೈನ್ಯವನ್ನು ಸಿಕಂದರಾಬಾದಕ್ಕೆ ಕರೆದೊಯ್ಯುತ್ತಿರುವರು.

# ವಾರದ ಸಿಂಹಾವಲೋಕನ

### ಇನ್ನಾದರೂ ವಿವೇಕಿಗಳಾಗಲಿ

ಭಾರತವನ್ನು ತಮ್ಮ ಕಪಿಮುಷ್ಟಿಯಲ್ಲಿಟ್ಟುಕೊಂಡಾಗ ಅದರ ಬಗ್ಗೆ ದೇಶವಿದೇಶಗಳಲ್ಲಿ ಅಪಪ್ರಚಾರ ನಡೆಸುವದು ಬ್ರಿಟಿಶ ಪತ್ರಿಕೆಗಳ ಮತ್ತು ಪ್ರತಿಗಾಮಿಗಳ ನಿತ್ಯದ ಕಾರ್ಯವಾಗಿದ್ದಿತು. ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಟ್ಟ ನಂತರವೂ ಅನೇಕರು ಅದೇ ಕುಹಕವನ್ನು ನಡೆಸಿದ್ದು ತುಂಬಾ ಶೋಚನೀಯ ಮತ್ತು ನಿಂದ್ಯವಾಗಿದೆ. ಹಿಂದುಸ್ಥಾನವು ಹೈದರಾಬಾದದ ಮೇಲೆ ಕ್ರಮ ಕೈಗೆತ್ತಿಕೊಂಡಿದ್ದು ಅತ್ಯಂತ ನ್ಯಾಯ್ಯ ಮತ್ತು ಪರಿಸ್ಥಿತಿಯನ್ನು ಶಾಂತಗೊಳಿಸಲು ಅತ್ಯಂತ ಆವಶ್ಯವಾಗಿದ್ದರೂ ಬ್ರಿಟಿಶ ಪ್ರತಿಗಾಮಿಗಳು ಮತ್ತು ಅವರ ಒಡೆತನದಲ್ಲಿದ್ದ ಪತ್ರಿಕೆಗಳು ಅದರ ಬಗ್ಗೆ ಅಪಪ್ರಚಾರವನ್ನೇ ನಡೆಸಿರುವವು. ಲಂಡನ್ನಿನಲ್ಲಿ ಹಿಂದುಸ್ಥಾನದ ಹಾಯಕಮಿಶನರರಾದ ಕೃಷ್ಣ ಮೆನನ್‌ರು ಈಗಾಗಲೇ ಈ ಬಗ್ಗೆ ಅವರಿಗೆ ಎಚ್ಚರಿಕೆ ಕೊಟ್ಟಿರುವರು. ಹೈದರಾಬಾದದ ವಿರುದ್ಧ ಹಿಂದುಸ್ಥಾನ ಸರಕಾರ ಕ್ರಮ ಕೈಕೊಂಡರೆ ಹಿಂದೀ ಮುಸಲ್ಮಾನರೆಲ್ಲ ಹುರಿದೆದ್ದು ದೇಶದಲ್ಲೆಲ್ಲ ರಕ್ತದ ಕಾಲುವೆ ಹರಿಯುವದೆಂದು ಈ ಪತ್ರಿಕೆಗಳು ಭವಿಷ್ಯ ನುಡಿದಿದ್ದು ಈಗ ಸುಳ್ಳಾಗಿದೆ. ಹಿಂದೀ ಮುಸಲ್ಮಾನರು ಪಂಗೆಬ್ಬಿಸಲಿಲ್ಲ ಇಷ್ಟೇ ಅಲ್ಲ ಈ ಕ್ರಮವನ್ನು ಕೈಕೊಂಡದ್ದಕ್ಕೆ ಹಿಂದುಸ್ಥಾನ ಸರಕಾರಕ್ಕೆ ಬೆಂಬಲ ಕೊಟ್ಟರು. ಈ ಸಂದರ್ಭದಲ್ಲಿ ಬ್ರಿಟಿಶ ಪ್ರತಿಗಾಮಿಗಳ ತೀವ್ರ ಅಜ್ಞಾನ ವ್ಯಕ್ತವಾಗುತ್ತದೆ. ಬ್ರಿಟಿಶ ಪತ್ರಿಕೆಗಳು ಮತ್ತು ಪ್ರತಿಗಾಮಿಗಳು ಇನ್ನು ಮುಂದೆಯಾದರೂ ಈ ಬಗೆಯ ಅಪಪ್ರಚಾರಕ್ಕೆಡೆಗೊಟ್ಟು ಹಿಂದ--ಬ್ರಿಟಿಶ ಸ್ನೇಹವನ್ನು ಕಲುಷಿತಗೊಳಿಸುವದನ್ನು ಬಿಟ್ಟುಗೊಡಬೇಕು. ಈ ಬಗೆಯ ಅಸತ್ಯಪ್ರಚಾರದಿಂದ ಅವರಿಗೆ ಇನ್ನು ಮುಂದೆ ಯಾವ ಪ್ರಯೋಜನವೂ ಆಗದು. ಕೃಷ್ಣಮೆನನರ ಸಕಾಲಿಕ ಎಚ್ಚರಿಕೆಯತ್ತ ಗಮನಿಸಿ ಬ್ರಿಟಿಶ ಪ್ರತಿಗಾಮಿಗಳು ವಿವೇಕಿಗಳಾಗುವರೆಂದು ಆಶಿಸುತ್ತೇವೆ.

### ಸದಿಚ್ಛೆ ಸಫಲವಾಗಲಿ

ಕಳೆದ ವರುಷದ ವರೆಗೆ ಅಖಂಡವಾಗಿದ್ದ ಹಿಂದುಸ್ಥಾನ ಪರಕೀಯರ ಕೈವಾಡದ ಪರಿಣಾಮವಾಗಿ ಒಡೆದು ಹೋಗಿದ್ದರೂ ಹಿಂದುಸ್ಥಾನ ಪಾಕಿಸ್ತಾನಗಳ ಸಂಬಂಧವು ಸ್ನೇಹಮಯವಾಗಿರಬೇಕಾದುದು ಆತ್ಯವಶ್ಯವಾಗಿದೆ. ಅಲ್ಪಸ್ವಲ್ಪ ಮತಭೇದ, ತಿಕ್ಕಾಟ ಆಗಾಗ ಏಳಬಹುದಾದರೂ ಅವನ್ನೆಲ್ಲ ಸದ್ಭಾವನೆಗಳಿಂದ ಸರಿಪಡಿಸಿಕೊಳ್ಳುವದು ಕ್ರಮಪ್ರಾಪ್ತವಾಗಿದೆ. ಹಿಂದುಸ್ಥಾನ ಸರಕಾರದವರು ಹೈದರಾಬಾದದ ಮೇಲೆ ಕ್ರಮ ಕೈಕೊಂಡದ್ದರಿಂದ ಪಾಕಿಸ್ತಾನಿಗಳಲ್ಲಿ ಕೆಲವುಟ್ಟಿಗೆ ಸಂಶಯಕ್ಕವಕಾಶವುಂಟಾಗಿತ್ತು. ಆದರೆ ಹಿಂದುಸ್ಥಾನದ ಮುಖ್ಯಮಂತ್ರಿಗಳಾದ ಪಂಡಿತ ಜವಾಹರಲಾಲರು ಆಕಾಶವಾಣಿಯಲ್ಲಿ ಭಾಷಣಮಾಡುತ್ತ, ಪಾಕಿಸ್ತಾನದ ಬಗ್ಗೆ ಸ್ನೇಹಮಯ ಧೋರಣವನ್ನೇ ಅನುಸರಿಸುವೆವು ಪಾಕಿಸ್ತಾನದವರು ಶಂಕಿತರಾಗಬೇಕಿಲ್ಲ ಎಂದು ಮುಂತಾಗಿ ಆಶ್ವಾಸಿಸಿರುವರು. ಇದಕ್ಕೆ ಉತ್ತರವಾಗಿ ಪಾಕಿಸ್ತಾನದ ಮುಖ್ಯಮಂತ್ರಿ ಲಿಯಾಕತ ಅಲ್ಲೀಖಾನರು ಪಾಕಿಸ್ತಾನ ಆಕಾಶವಾಣಿಯಲ್ಲಿ ಮಾತಾಡುತ್ತ ಸ್ನೇಹಪೂರ್ಣ ಹಸ್ತವನ್ನು ಮುಂದೆಮಾಡಿದ್ದಾರೆ. ಪಾಕಿಸ್ತಾನಕ್ಕಾದರೂ ಶಾಂತಿ ಬೇಕು. ಪಾಕಿಸ್ತಾನದ ಜನ್ಮದಿಂದಲೂ ನಾವು ಇದನ್ನೇ ಹಾರೈಸುತಿದ್ದು ಆ ಧೋರಣದಂತೆಯೇ ನಡೆಯುತ್ತ ಬಂದಿದ್ದೇವೆ ಎಂದು ಮುಂತಾಗಿ ಹೇಳಿರುವರು. ಎರಡೂ ಸರಕಾರಗಳು ಇಂತು ಪರಸ್ಪರ ಸ್ನೇಹ ಸುಹೃದ್ಭಾವನೆಗಳನ್ನು ತಾಳಿ ಅದರಂತೆ ಇರಹತ್ತಿದರೆ ಗೌರವಪೂರ್ಣರೀತಿಯಿಂದ ಅವು ಬಾಳಬಲ್ಲವು. ಎರಡೂ ರಾಷ್ಟ್ರಗಳ ಮುಖ್ಯಮಂತ್ರಿಗಳು ತಾಳಿದ ಸದಿಚ್ಛೆ ಸಫಲವಾಗಲೆಂದೇ ನಾವೀಸಮಯದಲ್ಲಿ ಹಾರಯಿಸುವೆವು.

### ಭಾರತೀಯ ವಾರ್ತಾಹರ ಸಂಸ್ಥೆ

ಬ್ರಿಟಿಶರಾಳಿಕೆಯಲ್ಲಿ ಉಳಿದೆಲ್ಲ ವಿಷಯಗಳ ಬಗ್ಗೆ ಭಾರತೀಯರು ಅಸ್ವತಂತ್ರರಾಗಿದ್ದಂತೆ ಸುದ್ದಿಗಳನ್ನು ಬಿತ್ತರಿಸುವದರಲ್ಲಿಯೂ ಅಸ್ವತಂತ್ರರಾಗಿದ್ದರು. ಬ್ರಿಟಿಶರ ಒಡೆತನದಲ್ಲಿರುವ ರಾಯಟರ ಸಂಸ್ಥೆಯವರು ಬಿತ್ತರಿಸುವ ಸುದ್ದಿ ಸಂಗತಿಗಳನ್ನೇ ಹಿಂದೀ ಸಂಪಾದಕರು ಪ್ರಸಿದ್ಧಿಸಬೇಕಾಗುತಿದ್ದಿತು. ಅನೇಕ ಸಂದರ್ಭಗಳಲ್ಲಿ ಮನಸ್ಸಿಗೆ ವಿರುದ್ಧವಾಗಿಯೂ ಈ ಕಾರ್ಯವನ್ನು ಮಾಡಬೇಕಾಗುತಿದ್ದಿತು. ಆದರೀಗ ಸ್ವಾತಂತ್ರ್ಯ ಪ್ರಾಪ್ತಿಯ ನಂತರ ಸುದ್ದಿಗಳನ್ನು ಬಿತ್ತರಿಸುವದರಲ್ಲಿಯೂ ಹಿಂದೀ ಪತ್ರಿಕೆಗಳು ಸ್ವಾತಂತ್ರ್ಯವನ್ನು ಪಡೆಯಲಣಿಯಾದುದು ಅಭಿನಂದನೀಯವಾಗಿದೆ. ಹಿಂದೀ ಮತ್ತು ಪೌರಸ್ತ್ಯ ಪತ್ರಿಕಾ ಸಂಘದವರು ರಾಯಟರ ಕಂಪನಿಯ ಕೂಡ ಒಡಂಬಡಿಕೆ ಮಾಡಿಕೊಂಡು ಅಸೋಸಿಯೇಟೆಡ್ ಪ್ರೆಸ್ ಆಫ್ ಇಂಡಿಯಾ ಎಂಬ ಹಿಂದುಸ್ಥಾನದಲ್ಲಿ ಸುದ್ದಿಯನ್ನು ಬಿತ್ತರಿಸುವ ಸಂಘವನ್ನು ತಮ್ಮ ವಶಪಡಿಸಿಕೊಂಡದ್ದರಿಂದ ಇನ್ನು ಮುಂದೆ ಪರಕೀಯರ ಕೈವಾಡವಿಲ್ಲದೆ ಹಿಂದುಸ್ಥಾನದಲ್ಲಿಯ ಸುದ್ದಿಗಳನ್ನು ಹಿಂದೀ ಪತ್ರಿಕೆಗಳು ಬಿತ್ತರಿಸಬಹುದಾಗಿದೆ. ರಾಯಟರ ಕಂಪನಿಯಲ್ಲಿ ಈ ಸಂಘದ ಪಾಲು ಇರುವದರಿಂದ ಅವರ ಡಾಯರೆಕ್ಟರ ಮಂಡಳದಲ್ಲಿಯೂ ಈ ಸಂಘದ ಪ್ರತಿನಿಧಿಯರ ಅವಕಾಶವುಂಟಾಗಿದೆ. ಇದರಿಂದ ಹಿಂದುಸ್ಥಾನದಿಂದ ಹೋಗುವ ಮತ್ತು ಪರದೇಶಗಳಿಂದ ಹಿಂದುಸ್ಥಾನಕ್ಕೆ ಬರುವ ಸುದ್ದಿ ಸಂಗತಿಗಳ ಮೇಲೆಯೂ ಈ ಸಂಘದ ನಿಯಂತ್ರಣವುಳಿಯುವದು. ಈ ಬಗೆಯ ಅಧಿಕಾರವನ್ನು ಪಡೆದ ಸಂಘವು ನಿಜವಾಗಿಯೂ ಅಭಿನಂದನೆಗೆ ಪಾತ್ರವಾಗಿರುವದು. ಹಿಂದೀ ಪತ್ರಿಕೆಗಳು ಈ ಮಹಾಕಾರ್ಯದಲ್ಲಿ ಈ ಸಂಘದೊಡನೆ ಎಲ್ಲ ಬಗೆಯಿಂದ ಸಹಕರಿಸಿ ಯೋಜನೆಯನ್ನು ಯಶಸ್ವಿಯಾಗಿಸುವವೆಂದು ನಂಬುತ್ತೇವೆ.

### ಗೋವಾದಲ್ಲಿ ದಬ್ಬಾಳಿಕೆ

ಪಶ್ಚಿಮ ಕರಾವಳಿಯಲ್ಲಿ ಪೋರ್ತುಗಾಲದ ಆಧೀನದಲ್ಲಿರುವ ಗೋವಾ ಪ್ರದೇಶದಲ್ಲಿಯ ಭಾರತೀಯರನ್ನು ಅನನ್ವಿತರೀತಿಯಿಂದ ಛಲಿಸಲಾಗುತಿದೆಯೆಂಬ ಸುದ್ದಿ ಒಂದೇಸಮನೆ ಬರಹತ್ತಿದೆ ಹಿಂದುಸ್ಥಾನ. ಸ್ವತಂತ್ರವಾದ್ದರಿಂದ ಗೋವಾದಲ್ಲಿಯ ಪ್ರಜೆಗಳೂ ಸ್ವಾತಂತ್ರ್ಯ ಸುಖದ ಸವಿಗನಸನ್ನು ಕಾಣುವದು ಸ್ವಾಭಾವಿಕ. ಆದರೆ ಅಲ್ಲಿನ ಸರಕಾರದವರು ಸ್ವಾತಂತ್ರ್ಯದ ಹುಟ್ಟನ್ನೇ ಅಡಗಿಸಿಬಿಡಲು ಬಗೆಬಗೆಯಿಂದ ದಬ್ಬಾಳಿಕೆ ನಡೆಸಿರುವರು. ಈ ಸಂಬಂಧದಲ್ಲಿ, ಗೋವಾ ರಾಷ್ಟ್ರೀಯ ಕಾಂಗ್ರೆಸ್ಸಿನ ಕಾರ್ಯದರ್ಶಿ ಶ್ರೀ ಜಾರ್ಜ ವಾಜ ಇವರು ಹಿಂದುಸ್ಥಾನದ ಮುಖ್ಯ ಮಂತ್ರಿಗಳಿಗೆ ಮಾಡಿಕೊಂಡ ಮನವಿಯಲ್ಲಿ ಅಲ್ಲಿನ ಪರಿಸ್ಥಿತಿಯನ್ನು ತಿಳಿಸಿದ್ದಾರೆ. 'ಖಾದಿಧಾರಿಗಳನ್ನೆಲ್ಲ ಸೆರೆಹಿಡಿಯುವ ಸತ್ರ ಪ್ರಾಂತದಲ್ಲೆಲ್ಲ ನಡೆದಿದೆ; ಗಾಂಧೀ ಟೊಪ್ಪಿಗೆಯನ್ನು ಧರಿಸಿದ ಅನೇಕರು ಸೆರೆಮನೆ ಕಂಡಿದ್ದಾರೆ. ಮಹಾತ್ಮಾ ಗಾಂಧಿ ಮತ್ತು ಪಂಡಿತ ಜವಾಹರಲಾಲರ ಭಾವಚಿತ್ರವನ್ನು ಇಟ್ಟುಕೊಳ್ಳುವದೂ ಮಹಾಪರಾಧವಾಗಿದೆ.' ಎಂದು ಮುಂತಾಗಿ ಎಲ್ಲಭಾಗದಿಂದ ವರದಿ ಬಂದಿದೆಯೆಂದು ಅವರು ನಿವೇದಿಸಿದ್ದಾರೆ. ಅಲ್ಲದೆ ಗೋವಾ ಇದೀಗ ಪರಕೀಯರ ಹೊಂಚು ಸಂಚುಗಳ ಬೀಡಾಗಿದೆ. ಇಂಥ ಸಂಧಿಕಾಲದಲ್ಲಿ ಇದನ್ನು ನಡೆಯಗೊಡುವದು ಗುಡಾಂತರಪ್ರದವಾಗಿದೆ, ಬ್ರಿಟಿಶ ಸರಕಾರದವರು ಇಂಥ ಸಂಧಿ ಸಮಯದಲ್ಲಿ ಗೋವಾ ಪ್ರದೇಶವನ್ನು ವ್ಯಾಪಿಸಿದಂತೆ ಹಿಂದುಸ್ಥಾನ ಸರಕಾರದವರು ಅದನ್ನು ಆಕ್ರಮಿಸಿ ಬಿಡಬೇಕೆಂದು ಅವರು ಸೂಚಿಸಿದ್ದಾರೆ. ಗೋವಾ ಪ್ರದೇಶವು ಎಂದಿನಿಂದಲೂ ಹಿಂದುಸ್ಥಾನದ ಭಾಗವಾಗಿದ್ದು ಪರಕೀಯರ ನಾಡಲ್ಲ ಎಂಬದಾಗಿ ಅವರು ಅಭಿಪ್ರಾಯಪಟ್ಟಿದ್ದಾರೆ. ಕೊನೆಯಲ್ಲಿ ಅವರು ಗೋವಾ ಪ್ರದೇಶದ ಜನರು ಯಾವಾಗಲೂ ಹಿಂದ ಸರಕಾರಕ್ಕೆ ನಿಷ್ಠರಾಗಿರುವವೆಂಬದಾಗಿ ಆಶ್ವಾಸಿಸಿದ್ದಾರೆ. ಹಿಂದುಸ್ಥಾನ ಸರಕಾರದವರು ಗೋವಾದಲ್ಲಿಯ ಜನತೆಯ ಹಕ್ಕು ಬಾಧ್ಯತೆಗಳ ಸಂರಕ್ಷಣೆಯತ್ತ ಲಕ್ಷ್ಯಗೊಡುವ ಸಮಯ ಸಮೀಪಿಸಹತ್ತಿದೆಂದು ಹೇಳಬಹುದಾಗಿದೆ.

# ಚರಕಕ್ಕೆ ಸರಕಾರೀ ಸಹಾಯ

"ಕೈಯಿಂದ ನೂಲುವದು ಮತ್ತು ನೇಯುವದನ್ನು ವಿಸ್ತರಿಸುವುದರ ಸದ್ಯದ ಸಾಧ್ಯಾಸಾಧ್ಯತೆಯ ವಿಷಯವಾಗಿ ವಿಚಾರ ಮಾಡಿದೆಯೋ? ಹಾಗಾದರೆ ಅದಕ್ಕಾಗಿ ಯಾವುದಾದರೂ ಯೋಜನೆಯನ್ನು ತಯಾರಿಸಲಾಗಿದೆಯೋ, ಅದರ ವೆಚ್ಚವನ್ನು ಅಂದಾಜು ಮಾಡಲಾಗಿದೆಯೋ? ಹಾಗೇನಾದರೂ ಇದ್ದರೆ ಯಾವುದಕ್ಕೆ ಸರಕಾರೀ ಸಹಾಯ ಅಗತ್ಯವಾಗಬಹುದು?" ಎಂಬುದನ್ನು ಹಿಂದೀ ಸರಕಾರ ಅ. ಭಾ. ಚರಕ ಸಂಘದಿಂದ ತಿಳಿಯಲು ಬಯಸಿದೆ. ಅಖಿಲ ಭಾರತ ಚರಕ ಸಂಘವು ಈ ವಿಷಯವಾಗಿ ತನ್ನ ವಿಚಾರಪೂರ್ಣವಾದ ಅಭಿಪ್ರಾಯಗಳನ್ನು ಸರಕಾರದ ಮುಂದೆ ಇಡುವದೆಂಬುರಲ್ಲಿ ನನಗೆ ಸಂದೇಹವಿಲ್ಲ.

ಅ. ಭಾ. ಚರಕ ಸಂಘದ ಪರವಾಗಿ ಮಾತಾಡಲು ನನಗೆ ಅಧಿಕಾರವಿಲ್ಲ. ಮತ್ತು ನಾನು ಹೇಳಿದ್ದಕ್ಕೆಲ್ಲ ಅದು ಬದ್ಧವಾಗರಾರದು. ಆದ್ದರಿಂದ ಈ ಪ್ರಬಂಧದಲ್ಲಿ ನನ್ನ ಅಭಿಪ್ರಾಯವನ್ನು ಹೇಳುವದರಲ್ಲಿ ನಾನು ಸ್ವಂತ ಅಭಿಪ್ರಾಯವನ್ನು ಮಾತ್ರ ಮುಂದಿಡುವೆನು. ೧೯೪೬ ರಲ್ಲಿ ಅ. ಭಾ. ಚರಕ ಸಂಘದ ಪುಣೆಯಲ್ಲಿ ನಡೆದ ಕಾರ್ಯನಿರ್ವಾಹಕ ಸಮಿತಿಯ ಒಂದು ಸಭೆಯಲ್ಲಿ ಗಾಂಧಿಯವರು ವಿಸ್ವಸ್ತರೊಡನೆ ಈ ಅಂಶವನ್ನು ಚರ್ಚಿಸಿ, ಠರಾವಿನ ಒಂದು ಕರಡನ್ನು ಪರಿಶೀಲನೆಗಾಗಿ ಅವರ ಮುಂದಿಟ್ಟರು. ಕೆಲವೊಂದು ತೊಂದರೆಗಳ ದೆಸೆಯಿಂದ ಆ ಠರಾವನ್ನು ಬಿಟ್ಟು ಬಿಟ್ಟಿದ್ದರೂ ಸಂಘದ ಕಾರ್ಯದರ್ಶಿಗಳು ಅದರ ಒಂದು ಪ್ರತಿಯನ್ನು ಅದರದಿಂದ ನನಗೆ ಕೊಟ್ಟರು. ಎದುರಿರುವ ಪ್ರಶ್ನೆಗೆ ಅದು ಸಂಬಂಧ್ಧವಾಗಿರುವದರಿಂದ ಇನ್ನೊಂದೆಡೆ ಅದರ ಅನುವಾದವನ್ನು ಕೊಡಲಾಗಿದೆ.

ನನ್ನ ನಮ್ರ ಅಭಿಪ್ರಾಯದಂತೆ ಗವರ್ನರ್ ಜನರಲ್ ಮತ್ತು ಮುಖ್ಯ ಮಂತ್ರಿಗಳಿಂದ ಪ್ರಾರಂಭಿಸಿ ಯಾವುದಾದರೊಂದು ರಾಜಕೀಯ ಪಕ್ಷ ಅಥವಾ ಧಾರ್ಮಿಕ ಪಂಥದ ಬುದ್ಧಿಶಾಲಿಯಾದ ಅತಿಚಿಕ್ಕ ನಾಗರಿಕನ ವರೆಗಿನ ನಾವೆಲ್ಲರೂ ಚರಕದ ಪ್ರಸಾರಕ್ಕೆ ಧನರೂಪದ ಸಹಾಯಕ್ಕಿಂತ ಸರಕಾರದ ಮತ್ತು ಬುದ್ಧಿಶಾಲಿ ನಾಗರಿಕರ ನೈತಿಕ ಮತ್ತು ಆಧ್ಯಾತ್ಮಿಕ ಸಹಾಯ ಹೆಚ್ಚಾಗಿಬೇಕು ಎಂಬುದನ್ನು ಕಂಡುಕೊಂಡು ಅದನ್ನು ಮನನ ಮಾಡುವುದೇ ಮೂಲಭೂತ ಸತ್ಯ. ಚರಕ ಅತಿ ಸರಳ ಮತ್ತು ಸುಲಭ ಬೆಲೆಗೆ ಸಿಗುವ ಒಂದು ಯಂತ್ರೋಪಕರಣ. ಅದರಿಂದ ಹಿಂದೀ ರಾಷ್ಟ್ರವನ್ನು ನೈತಿಕ, ಆರ್ಥಿಕ ಮತ್ತು ಸಾಮಾಜಿಕ ಜೀವನದಲ್ಲಿ ಉನ್ನತ ಮಟ್ಟಕ್ಕೆ ಎತ್ತಬಹುದು.

ಇಂಗ್ಲೆಂಡು ಬಹಳ ಔದ್ಯಮೀಕರಣಕ್ಕೊಳಗಾದ ದೇಶ. ಅದು ಒಂದು ಪ್ರಥಮ ಶ್ರೇಣಿಯ ವೈಶ್ಯರಾಷ್ಟ್ರವೂ ಹೌದು. ನೆಪೋಲಿಯನ್ನನು ಅದನ್ನು "ಅಂಗಡಿಕಾರರ ನಾಡು" ಎಂದು ಹಳಿದನು. ಅದೇನೋ ಹಾಗೇ ಇತ್ತು, ಆ ವಿದ್ಯೆಯಲ್ಲಿ ಅದು ಬಹಳ ಯಶಸ್ಸನ್ನು ಪಡೆದಿತ್ತು. ಆದರೆ ತನ್ನ ಔದ್ಯಮಿಕ ಮತ್ತು ವಾಣಿಜ್ಯಕ ಪ್ರತಿಭೆಗಾಗಿ ಅದು ಸ್ವತಃ ಹೆಮ್ಮೆ ಪಡಲಿಲ್ಲ. ನಾವಿಕರ ರಾಷ್ಟ್ರವೆಂದು ಕರೆಸಿಕೊಳ್ಳುವುದು ಅದಕ್ಕೆ ತುಂಬ ಇಷ್ಟ. ರಾಜವಂಶದ ಪ್ರತಿಯೊಬ್ಬ ಗಂಡಸೂ ಸಮುದ್ರಯಾನದಲ್ಲಿ ಶಿಕ್ಷಣವನ್ನು ಪಡದೇ ಪಡೆಯುತ್ತಾನೆ. ಪ್ರತಿಯೊಂದು ಕುಟುಂಬವೂ ಒಬ್ಬ ಮಗನನ್ನು ಸಮುದ್ರಸಂಚಾರಕ್ಕೆ ಕಳುಹಲು ಇಷ್ಟಪಡುತ್ತದೆ. ರಾಜಪಟ್ಟಕ್ಕೆ ಹಕ್ಕುದಾರನು ಕೂಡ ಹಡಗಿನ ಯಾವ ನೌಕರಿಯನ್ನೂ ತನ್ನ ಗೌರವಕ್ಕೆ ಕಡಿಮೆಯೆಂದು ತಿಳಿದುಕೊಳ್ಳುವುದಿಲ್ಲ. ಉದ್ಯಮದ ಮತ್ತು ವಿಜ್ಞಾನದ ಸರ್ವಶಾಖೆಗಳಲ್ಲಿ ಬೇಕಾದಷ್ಟು ಪ್ರಗತಿಯಾಗಿದ್ದರೂ ನಾವಿಕ ವೃತ್ತಿಯ ಪರಂಪರೆಯನ್ನು ಅದು ಉಳಿಸಿಕೊಂಡೇ ಇದೆ.

ಒಂದು ಯುದ್ಧ ಪ್ರಾರಂಭವಾಯಿತೆಂದರೆ ಮತ್ತು ಕಾಲುಚೀಲ, ಬೆವರಂಗಿ, ಮುಂತಾದ ಇತರ ಉಣ್ಣೆಯ ಬಟ್ಟೆಗಳ ಅಗತ್ಯ ಉಂಟಾದರೆ ಮಹಾರಾಣಿಯಿಂದ ಹಿಡಿದು ಪ್ರತಿಯೊಬ್ಬ ಹೆಂಗಸೂ ಅವಶ್ಯಕತೆಯನ್ನು ಪೂರಯಿಸಲು ತಾನೇ ಸ್ವತಃ ಹೆಣೆಯಬೇಕೆಂದು ಅಂದುಕೊಳ್ಳುತ್ತಾಳೆ. ಎಲ್ಲ ಬಗೆಯ ನೆಯ್ಗೆಯ ಬಟ್ಟೆಗಳ ತಯಾರಿಕೆಗೂ ತಾಂತ್ರಿಕ ವಿಜ್ಞಾನವು ಯಂತ್ರದ ಹೆಣಿಗೆಯ ಸಾಧನವನ್ನು ನಿರ್ಮಿಸಲು ಶಕ್ತವಾಗಿದೆ. ಆದರೆ ಅದು ಒಂದು ಜೊತೆ ಸರಳವಾದ ಮರದ, ಉಕ್ಕಿನ ಇಲ್ಲವೆ ಎಲುಬಿನ ಕಡ್ಡಿಗಳು ಮೂಲೆಗೆ ಸೇರುವಂತೆ ಮಾಡಿಲ್ಲ. ನೂಲುಗಾರರಲ್ಲಿ ಕದಿರಿರುವಂತೆ ರೈಲು, ಕಾರು, ಬಸ್ಸು ಮತ್ತು ಸಭೆಗಳಲ್ಲಿ ಕೂಡ ಹೆಣಿಗೆಯ ದಬ್ಬಣಗಳು ಕೆಲಸ ಮಾಡುತ್ತಿರುವುದನ್ನು ಕಾಣಬಹುದು. ಮಹಾರಾಣಿ ಅದನ್ನು ಪ್ರೋತ್ಸಾಹಿಸುವುದು ತನ್ನ ಕರ್ತವ್ಯವೆಂದು ತಿಳಿಯುತ್ತಾಳೆ. ಹೊಟ್ಟೆ ಹೊರೆದುಕೊಳ್ಳಲು ಹೆಣೆವ ಬಡ ಗರತಿಗೆ ಗೊತ್ತಿರುವಂತೆ ಆವಳಿಗಾದರೂ ಹೆಣಿಗೆ ಖಂಡಿತವಾಗಿಯೂ ಗೊತ್ತಿದೆ.

ನಾವಿಕ ವೃತ್ತಿಯನ್ನಾಗಲಿ, ಸೌಚಿಕ ವೃತ್ತಿಯನ್ನಾಗಲಿ, ಅದರಿಂದ ಬರುವ ಲಾಭವೆಷ್ಟೆಂಬ ದೃಷ್ಟಿಯಿಂದ ಪರಿಗಣಿಸಲಾಗುವುದಿಲ್ಲ. ಆಂಗ್ಲ ರಾಜಕುಮಾರ ಮತ್ತು ಕೆಲಸಗಾರ ಈ ಇಬ್ಬರೂ ತಾವು ಒಳ್ಳೆಯ ನಾವಿಕರಲ್ಲವಾದರೆ ತಮ್ಮ ಆಂಗ್ಲತ್ವದಲ್ಲಿ ಏನೋ ಒಂದು ಕೊರತೆಯಿದೆ ಎಂದು ಭಾವಿಸುತ್ತಾರೆ. ಮಹಾರಾಣಿ ಮತ್ತು ಸಾಮಾನ್ಯ ಗೃಹಿಣಿ ಈ ಇಬ್ಬರೂ ಹೆಣಿಗೆಯನ್ನು ಕಲಿಯದಿದ್ದರೆ ತಾವು ಪರಿಪೂರ್ಣರಲ್ಲ ಎಂದು ತಿಳಿಯುತ್ತಾರೆ. ಆದರಲ್ಲಿ ಸ್ಪರ್ಶಾತೀತವಾದ ಒಂದು ಅಂತಃಸ್ಫೂರ್ತಿಯಿದೆ—ಅದನ್ನು ಆಧ್ಯಾತ್ಮಿಕ, ನೈತಿಕ, ಭಾವಿಕ, ಪರಂಪರಾಗತ, ದೇಶಪ್ರೇಮಜನ್ಯ ಎಂದು ನಿಮಗೆ ಇಷ್ಟಬಂದಂತೆ ಕರೆಯಬಹುದು; ಫಲಿತಾಂಶದಲ್ಲಿ ರಾಷ್ಟ್ರದ ಭೌತಿಕ ಸಂಪತ್ತನ್ನು ಹೆಚ್ಚಿಸುವುದಾದರೂ. ಅದು ಮೂಲತಃ ಕೇವಲ ಹಣಗಳಿಸುವ, ಭೌತಿಕ ಸುಖದ ಸಾಧನವಲ್ಲ.

ಅದೇ ಮೇರೆಗೆ, ನಾವು ಒಕ್ಕಲಿಗರ ಮತ್ತು ಖಾದಿ ಧಾರಿಗಳ ಒಂದು ರಾಷ್ಟ್ರ. ಅದು ನಾಡಿಗೆ ಪ್ರಕೃತಿಯಿಂದ ಅಜ್ಞಪ್ತವಾದ ಒಂದು ಬಹುಮುಖ್ಯ ಉದ್ಯೋಗ. ಉಳಿದೆಲ್ಲ ಉದ್ಯೋಗಗಳು ಎಷ್ಟೇ ಕಣ್ಣುಕುಕ್ಕುವಷ್ಟು ಆಕರ್ಷಕವಾಗಿದ್ದರೂ ಅವು ನಮ್ಮ ಜೀವನದ ಒಂದು ಚಿಕ್ಕ ಮೂಲೆಯನ್ನು ಮಾತ್ರ ತುಂಬಬಲ್ಲವು. ಒಂದು ವಜ್ರದುಂಗುರ ಬೆರಳನ್ನು ಅಲಂಕರಿಸಬಹುದು, ಧರಿಸಿದವನ ಡಾಂಭಿಕತೆಯನ್ನು ತೃಪ್ತಿಗೊಳಿಸಬಹುದು ಮತ್ತು ಕೆಲಮಟ್ಟಿಗೆ ಅವನ ಹಣದ ಉಳಿಕೆಯ ಲೆಕ್ಕವನ್ನು ಹೆಚ್ಚಿಸಬಹುದು, ಆದರೂ ಅದು ಧರಿಸಿಕೊಂಡ ಬೆರಳಿಗೆ ಬಹಳಶೀತ ಅಥವಾ ಉಷ್ಣವಾದರೆ ಒಮ್ಮೆ ಕೂಡ ರಕ್ಷಣೆಕೊಡಲುಶಕ್ತವಾಗದು ಮತ್ತು ಬಟ್ಟೆ ಸಿಗದಾಗ ಅವನ ನಗ್ನತೆಯನ್ನು ಅದು ಮುಚ್ಚಲಾರದು, ಮಾರವಾಡದ ಮರುಭೂಮಿಯಲ್ಲಿ ಅವನ ನೀರಡಿಕೆಯನ್ನು ಹಿಂಗಿಸದು ಅಥವಾ ಕೈಲಾಸ ಪರ್ವತದಲ್ಲಿ ಅವನ ಹಸಿವನ್ನು ತಣಿಸಲಾರದು; ಉಳಿದೆಲ್ಲ ಉದ್ಯಮಗಳನ್ನೂ ಒಟ್ಟುಮಾಡಿ ನೋಡಿದರೆ ಹಾಗೇ ತೋರುವುದು.

ಸರಕಾರಗಳು ಮತ್ತು ಉದ್ಯಮಿಗಳಿರಲಿ ಇತರರಿರಲಿ, ಅಣುವನ್ನು ವಿಚ್ಛೇದಿಸುವ ವರೆಗೆ ಔದ್ಯಮೀಕರಣ ಮತ್ತು ನವೀನೀಕರಣಗಳಲ್ಲಿ ಗಾಢ ಶ್ರದ್ಧೆಯುಳ್ಳವರು ಕೂಡ ಚರಕದ ರಾಷ್ಟ್ರ ಎಂದು ಹೇಳಿಸಿಕೊಳ್ಳುವುದೇ ಭಾರತದ ಹೆಮ್ಮೆ ಎಂಬ ಭಾವವನ್ನು ಅರಿತು ಅವರಲ್ಲಿ ಒಂದಾದರೆ ಖಾದಿಯ ಉತ್ಪಾದನವನ್ನು ಪ್ರೋತ್ಸಾಹಿಸಲು ಅಗತ್ಯವಾದ ಪ್ರಾರಂಭಿಕ ಕ್ರಮಗಳನ್ನು ಯೋಜಿಸುವುದು ಕಷ್ಟಕರವಲ್ಲ.

ಕಳೆದ ಯುದ್ಧ ಸುರುವಾದಾಗ ಗಾಂಧಿಯವರು ಅಂದಿನ ವೈಸರಾಯರನ್ನು ಕಂಡು ಮಿತ್ರರಿಗೆ ಭಾರತದ ಬೆಂಬಲವನ್ನು ಯಾವ ಶರ್ತೂ ಇಲ್ಲದೆ ಕೊಟ್ಟರು. ನೈತಿಕ ಬೆಂಬಲದ ಬೆಲೆಯನ್ನು ವೈಸರಾಯರು ಅರಿತುಕೊಳ್ಳಲಾರದಾದರು. ಅವರಿಗೆ ಧನಕನಕ, ವಸ್ತುವಾಹನ ಮತ್ತು ಜರ್ಮನ್ ಬಂದೂಕುಗಳಿಗೆ ಗುರಿಯಾಗಬಲ್ಲ ಜೀವಿಗಳು—ಈ ರೂಪದ ಸಹಾಯಬೇಕಾಗಿತ್ತು. ಬಲಾತ್ಕಾರದಿಂದ ಬರುವ ಎರಡನೆಯ ವಿಧದ ಸಹಾಯಕ್ಕಿಂತ ಮೊದಲಿನ ಸಹಾಯ ಬಂದರೆ ಅದರ ಜೊತೆಗೆ ಬರುವ ಸ್ವಯಂ ಪ್ರೇರಣೆಯ ಭೌತಿಕ ಸಹಾಯವೂ ಮತ್ತಷ್ಟು ಹೆಚ್ಚಿನದಾಗುತ್ತಿತ್ತೆಂಬುದನ್ನು ಅವರು ಅರಿಯದಾದರು. ಚರಕಕ್ಕೆ ಸಹಾಯ ಕೊಡುವಲ್ಲಿ ನಮ್ಮ 'ಸರಕಾರವು ಹಿಂದಿನ ಸರಕಾರದ ಮನೋಭಾವವನ್ನು ತಾಳದಿರಲಿ. ಭಾರತೀಯರಿಗೆ ಅಗತ್ಯವಾದ ಪ್ರೋತ್ಸಾಹ ಮತ್ತು ಮುಂದೊತ್ತುಗಳು ಬಹಳವಾಗಿ ನೈತಿಕವಿದೆಯಲ್ಲದೆ ಭೌತಿಕವಿಲ್ಲ. ನೈತಿಕ ಪುನರುತ್ಥಾನವಾದೊಡನೆ ಅದರ ಜೊತೆಗೇ ಭರಿತ ಇಳಿತಗಳು ಚಂದ್ರನನ್ನು ಹಿಂಬಾಲಿಸುವಂತೆ ಭೌತಿಕ ಪುನರುಜ್ಜೀವನವೂ ಆಗಿಯೇ ಆಗುತ್ತದೆ. ಜನರಿಗೆ ನೆರವು ದೊರೆತು ಅವರಲ್ಲಿ ನೀತಿಪ್ರಬೋಧವಾಗುವ ತನಕ ಔದ್ಯಮಿಕವಿರಲಿ ಗ್ರಾಮೋದ್ಯಮ ಸಂಬದ್ಧವಿರಲಿ, ಯಾವ ಆರ್ಥಿಕ ಯೋಜನೆ, ನಿಯಂತ್ರಣ, ದಂಡ, ನಿರೋಧಕ ಕ್ರಮ, ಬಲಾತ್ಕಾರ, "ಹೆಚ್ಚು ಅನ್ನ ಬೆಳೆಯಿರಿ" ಇಲ್ಲವೆ "ಉತ್ಪಾದನೆ ಹೆಚ್ಚಿಸಿರಿ" ಎಂಬ ಜಾಹೀರಾತುಗಳೂ ನಾಡನ್ನು ಅದು ಈಗ ಸಿಕ್ಕಿಕೊಳಿಯುತ್ತಿರುವ ಕೆಸರಿಂದ ಮೇಲೆತ್ತುವುದರಲ್ಲಿ ಜಯಶಾಲಿಯಾಗಲಾರವು. ಒಪ್ಪಿಗೆಯಾದರೆ ಈ ಕೆಳಗಿನ ಸಲಹೆಗಳನ್ನು ಗ್ರಾಹ್ಯವೆಂದು ಗಣಿಸಬಹುದು.

ಒಬ್ಬೊಬ್ಬರಾಗಿ ಇಲ್ಲವೆ ಸಭೆ ಸೇರಿ ಮುಖ್ಯ ಮುಖ್ಯ ಸರಕಾರಿ ಅಧಿಕಾರಿಗಳು ಮತ್ತು ಶ್ರೀಮಂತ ಸಮಾಜಗಳು ಸ್ವತಃ ತಪ್ಪದೆ ನೂಲಬೇಕು. ಇಂದಿನ ಗವರ್ನರ, ಮಂತ್ರಿ, ಇಲ್ಲವೆ ಕಾರ್ಯದರ್ಶಿ ಮುಂತಾದವರಿಗೆ ಕೆಲಸ ಮಾಡಿ ಎಷ್ಟೇ ದಣಿದಿರಲಿ ಪ್ರತಿನಿತ್ಯ ಕ್ಷವರ ಮಾಡಿಕೊಳ್ಳುವುದು. ಬಟ್ಟೆ ಹಾಕಿಕೊಳ್ಳುವದು, ಬಾಚಿಕೊಳ್ಳುವದು, ಆಗೀಗ ಚಹಾ ಇಲ್ಲವೆ ಭೋಜನ ಸಮಾರಂಭಕ್ಕೆ ಹೋಗುವದು ಇಲ್ಲವೆ ತಾವೇ ಅಣಿಮಾಡುವುದು; ನಮಸ್ಕಾರ ತೆಗೆದುಕೊಳ್ಳುವದು, ಗೌರವ ರಕ್ಷೆ ಸ್ವೀಕರಿಸುವದು, ಬಾವುಟ ಏರಿಸುವದು, ರಾಷ್ಟ್ರಗೀತ ಹಾಡುವಾಗ ಕಾದಿರುವದು. ಇವೆಲ್ಲವನ್ನೂ ತಮ್ಮ ಕರ್ತವ್ಯದ ಅಂಶಗಳನ್ನಾಗಿ ತಿಳಿದು ಮಾಡಲು ಸಮಯ ಸಿಕ್ಕುವಂತೆಯೇ ಅವರು ತಪ್ಪದೇ ನೂಲುವದನ್ನು ರಾಷ್ಟ್ರದ ಬಗ್ಗೆ ತಾನು ಮಾಡಬೇಕಾದ ಒಂದು ಕರ್ತವ್ಯವೆಂದು ಪರಿಗಣಿಸಬೇಕು. ಅವರು ಸಾರ್ವಜನಿಕವಾಗಿ ನೂಲುವುದರಲ್ಲಿ ಭಾಗವಹಿಸಲು ಸಮಯ ಹೊಂದಿಸಿಕೊಳ್ಳಬೇಕು —ಆದರೆ ಅದು ಅಲ್ಲಿ ಹೋಗಿ ಒಂದು ಭಾಷಣ ಮಾಡುವುದರಲ್ಲಿಲ್ಲ; ಸ್ವತಃ ಆ ಕೆಲಸದಲ್ಲಿ ಪಾತ್ರವಹಿಸುವುದರಲ್ಲಿದೆ. ಅಂಥ ನೌಕರರು ತಮ್ಮ ಸಂದರ್ಶನಗಳಲ್ಲಿ ತಮ್ಮ ಕಾರ್ಯಕ್ರಮದ ಒಂದು ಅಂಶವನ್ನಾಗಿ ತಿಳಿದು ಸಾರ್ವಜನಿಕವಾಗಿ ನೂಲುವುದಕ್ಕೆ ವ್ಯವಸ್ಥೆ ಮಾಡಬೇಕು. ಇದನ್ನು ಕೇವಲ ಪ್ರದರ್ಶನಕ್ಕಾಗಿ ಮಾಡಕೂಡದೆಂಬುದನ್ನು ಎಲ್ಲರೂ ತಿಳಿದುಕೊಳ್ಳಬೇಕು. ಅದು ಅವರ ಅನ್ನಕ್ಕೆ ಉಪ್ಪಿದ್ದಂತಿರಬೇಕು.

ಚರಕದ ಅರ್ಥ್ವೀಪಾರ್ಜನ ಸಶಕ್ತಿಯಾದರೂ ಅಮುಖ್ಯವೆಂದು ಹೇಳಲಾಗದು. ಅಲ್ಲದೆ, ಅದಕ್ಕೆ ಸದ್ಯದಿಂದ ಪರ್ವತ ಪರಿಮಾಣದ ಬಂಡವಾಲ ಇಲ್ಲವೆ ಆ ವ್ಯತ್ತ ಅಗತ್ಯವಿಲ್ಲ, ಹೆಚ್ಚಿನ ಸುಧಾರಣೆ ಹೊಂದಿದ ಹೊಸ ಚರಕ ಬಂದು ಇಂದಿನ ಚರಕವನ್ನು ಕಸದಬುಟ್ಟಿಗೆ ಎಸೆವಂತೆ ಮಾಡಿದರೂ ಅದರಿಂದಾಗುವ ನಷ್ಟವು ಬಹಳ ಸ್ವಲ್ಪ. ಆದರೆ ಅದರ ಹೆಚ್ಚಿನ ಬೆಲೆ ಮತ್ತು ಸತ್ವ ಅದು ಜನರಲ್ಲಿ ಬೆಳೆಸಬಲ್ಲ ಅಭ್ಯಾಸಗಳಲ್ಲಿಯೂ ನಮ್ಮ ರಾಷ್ಟ್ರಕ್ಕೆ ಅದು ನಮ್ಮ ಈಗಿನ ಬೆಳವಣಿಗೆಯ ಅವಸ್ಥೆಯಲ್ಲಿ ಕೊಡಬಲ್ಲ ಹೊಸದಾದ ನೈತಿಕ ಸಂಸ್ಕಾರದಲ್ಲಿಯೂ ಇದೆ. ಅದರಂತೆ ಇದೀ ರಾಷ್ಟ್ರದಲ್ಲಿ ಹೊಸ ಬಗೆಯ ಒಂದು ರೋಮಾಂಚನ ಮತ್ತು ನೈತಿಕ ನಿಷ್ಠೆಗಳು ಉದ್ಭವಿಸುವಂತೆ ಇನ್ನಾವುದೂ ಮಾಡಲಾರದು. ರಾಷ್ಟ್ರವನ್ನು ಆಳುವವರು ಅದರ ಬೆಲೆಯನ್ನು ಅರಿತುಕೊಳ್ಳಲಿ

ವರ್ಧಾ, ೬-೯-೪೮ —ಕಿ. ಘ. ಮಶ್ರೂವಾಲಾ

# ಹೈದರಾಬಾದದ ವಿರುದ್ಧ ಕ್ರಮ

ಹೈದ್ರಾಬಾದದ ವಿರುದ್ಧ ಸೈನಿಕ ಯೋಜನೆ ಕೈಕೊಳ್ಳಲ್ಪಟ್ಟಿತ್ತು; ಬಹುತಃ ಅದು ಮುಗಿದಂತಾಗಿದೆ. ಇದೇನು ಅನಿರೀಕ್ಷಿತವಾಗಿರಲಿಲ್ಲ. ರಾಷ್ಟ್ರೀಯವ್ಯಕ್ತಿಯು ಇಲ್ಲವೆ ಕಾಂಗ್ರೆಸ ಮನೋವೃತ್ತಿಯ ಯಾವ ಪತ್ರಿಕೆಯೂ ಅಥವಾ ಯಾವ ಸನ್ಮಾನ್ಯ ನಾಗರಿಕನೂ ಇದಕ್ಕಾಗಿ ವಿಷಾದ ಪಡುವಂತೆ ತೋರುವದಿಲ್ಲ. ಶ್ರೀ ಭನಸಾಲಿಯವರುಕೂಡ ಈ ಮೊದಲು ಏಕೆ ಕ್ರಮವನ್ನು ತೆಗೆದುಕೊಳ್ಳಲಿಲ್ಲ ಎಂದು ಬಳಲಿದ್ದುಂಟು. ಹಿಂದುಸ್ತಾನ ಸರಕಾರಕ್ಕೆ ಈ ಬಗೆಯ ಕ್ರಮವನ್ನು ತೆಗೆದುಕೊಳ್ಳಬೇಕಾದ ಪ್ರಸಂಗ ಬಂದುದಕ್ಕೆ ಜನತೆಗಿಂತ ಹಿಂದುಸ್ತಾನ ಸರಕಾರಕ್ಕೆ ನಿಜವಾಗಿ ಹೆಚ್ಚು ವಿಷಾದವೆನಿಸಿದೆ. ಬ್ರಿಟನ್ನಿನ ಪರರಾಷ್ಟ್ರ ಮಂತ್ರಿಗಳಾದ ಶ್ರೀ ಬೆವಿನ್ನರ ಭಾಷಣದ ವರದಿಯೆಂದು ಪ್ರಸಿದ್ಧವಾದುದರಲ್ಲಿ ಇದು ಚೆನ್ನಾಗಿ ವ್ಯಕ್ತವಾಗುವದು.

(ಈ ಹೊಸ ಪಡಾಪತಿನಲ್ಲಿ ಯುದ್ಧೋತ್ಸಾಹ ಬಲಿತಿದೆ ಅದರ ಮಟ್ಟಿಗೆ ಮಾತ್ರ ಅದು ಪರಿಮಿತವಾಗಿದೆ ಎಂದಲ್ಲ ಎಂಬ ಬಗ್ಗೆ ನನಗೆ ವಿಶ್ವಾಸವಿದೆ. ಕಡ್ಡಿಯನ್ನು ಕೊರೆದು ಒಗೆದದ್ದಾದರೆ ಅದರ ಕೊನೆಯೆಂದು ಆಗ ಬಹುದೆಂಬದನ್ನು ನಾವು ಹೇಳಲಾರೆ.)

ದಂಡಯೋಜನೆಯನ್ನು ಸಂಪೂರ್ಣವಾಗಿ ನಿಷೇಧಿಸದಿದ್ದವರಿಗೆ ಹಿಂದುಸ್ತಾನ ಸರಕಾರದ ನಿಃಸಹಾಯತೆಯನ್ನು ಅರಿಯುವದು ಕಠಿನವೇನು ಅಲ್ಲ. ಬಹಳ ದಿನಗಳಿಂದ ಅನಿರ್ಬಂಧವಾಗಿ ಸಾಗಿದ್ದ ಮತ್ತು ನಿಲ್ಲಬಹುದೆಂಬದರ ಲಕ್ಷಣ ಕೂಡ ಕಾಣಿಸದಿದ್ದ ಕೊಳ್ಳಿ ಮತ್ತು ಕೊಲೆಯನ್ನು ಲಕ್ಷಿಸಿದರೆ ಕೈಕೊಳ್ಳಲ್ಪಟ್ಟ ಸೈನಿಕ ಕ್ರಮವು ಬಹಳ ಕಡಮೆ ಅವಧಿಯದು ಮತ್ತು ಎರಡೂ ಪಕ್ಷಗಳಿಗೆ ಕಡಮೆ ಪ್ರಾಣ ಮತ್ತು ವಿತ್ತ ಹಾನಿಯದು ಆಗಿತ್ತೆಂಬುದು ನಿರ್ವಿವಾದ.

ಆದರೆ ಈ ಸೈನಿಕ ಯೋಜನೆಯು ಪ್ರತ್ಯಕ್ಷ ಯುದ್ಧವಾಗಿರಲಿ ಇಲ್ಲದಿರಲಿ, ಬಹಳ ಅವಧಿಯವರೆಗೆ ನಡೆದಿರಲಿ ಇಲ್ಲವೆ ಬೇಗ ಮುಗಿದಿರಲಿ ಅದರ ಪ್ರಾಮುಖ್ಯವಾದ ಹಿಂಸಾತ್ಮಕ ಮತ್ತು ಭ್ರಾತೃಹತ್ಯೆಯ ಸ್ವರೂಪವೆಂತೂ ಬದಲಾಗಲಾರದು. ಅದರ ಮೂಲದೋಷವು ಹೈದರಾಬಾದದ್ದಿರಲಿ, ಪಾಕಿಸ್ತಾನದ್ದಿರಲಿ ಅಥವಾ ಹಿಂದುಸ್ತಾನದ್ದಿರಲಿ ಇಲ್ಲವೆ ಹಿಂದುಗಳದ್ದಾಗಿರಲಿ ಮುಸಲ್ಮಾನರದಾಗಿರಲಿ ಅಥವಾ ಶೀಖರದಿರಲಿ. ಆಳುವವರಾಗಲಿ ಧುರೀಣರಾಗಲಿ, ಸಾರ್ವಜನಿಕ ಅಭಿಪ್ರಾಯ ಮತ್ತು ಹಿಂದುಸ್ತಾನ ಪಾಕಿಸ್ತಾನ ಕಾಶ್ಮೀರ ಮತ್ತು ಹೈದ್ರಾಬಾದಗಳ ಸಾಂಘಿಕ ಬುದ್ಧಿಶಕ್ತಿಯು ಸ್ವಯಂಕೃತ ಸಮಸ್ಯೆಗಳನ್ನು ಶಾಂತ ಮತ್ತು ಸನ್ಮಾನ್ಯ ರೀತಿಯಿಂದ ಬಿಡಿಸಲು ಸಮರ್ಥವಾಗಲಿಲ್ಲೆಂಬುದು ನಿರ್ವಿವಾದವಾಗಿದೆ. ಎಷ್ಟೇ ಅಪರಿಹಾರ್ಯವಾಗಿದ್ದರೂ ಸೈನಿಕ ಚಟುವಟಿಕೆಗಳೇನು ಹೆಮ್ಮೆಪಡಬೇಕಾದ ಸಂಗತಿಗಳಲ್ಲ. ನಿಜಾಮರು ಶರಣು ಬಂದರೆಂಬ ಸುದ್ದಿ ಕೇಳಿ ವಿಜಯೋತ್ಸಾಹದಿಂದ ಕುಣಿದಾಡುವದು ಸರ್ವಥಾ ಭೂಷಣವಲ್ಲ.

ಹಿಂದುಸ್ತಾನದೊಡನೆ ಶಾಂತ ಮತ್ತು ಗೌರವಪೂರ್ಣ ರೀತಿಯಲ್ಲಿ ಒಡಂಬಡಿಕೆ ಮಾಡಿಕೊಳ್ಳುವದನ್ನು ಬಿಟ್ಟು ಅತ್ಯಂತ ಹೀನ ಪಾಶವೀಕೃತ್ಯಕ್ಕೆ ಅವಕಾಶ ಕೊಟ್ಟು ವಾಮಮಾರ್ಗದ ಪ್ರತಿಭಟನೆಯ ಪ್ರದರ್ಶನಮಾಡಿ ಅನಂತರ ಶ್ರೇಷ್ಠ ಸೈನಿಕ ಶಕ್ತಿಗೆ ಶರಣು ಬರುವ ದಾರಿಯನ್ನೇಕೆ ನಿಜಾಮರು ಹಿಡಿದರೆಂಬದು ರಾಜತಂತ್ರಜ್ಞರಲ್ಲದ ಸರಳ ಮನಸ್ಸಿನವರಿಗೆ ಹೊಳೆಯದು: ಜಾತಿಜಾತಿಗಳ ಭಾವೀ ಸಂಬಂಧದ ಮೇಲೆ ಈ ಹಿಂಸಾತ್ಮಕಪ್ರದರ್ಶನಗಳ ಪರಿಣಾಮವೆಂತಾಗುವದೋ ಹೇಳಲಿಕ್ಕಾಗದು. ತಾತ್ಕಾಲಿಕಪರಿಣಾಮಗಳೆಂದರೆ ಸಂಖ್ಯಾ ಪ್ರಮಾಣದಲ್ಲಿ ಇಲ್ಲವೆ ರಾಜಕೀಯ ಶಕ್ತಿಯಲ್ಲಿ ಅಶಕ್ತರಾಗಿದ್ದ ಸ್ಥಳಗಳಲ್ಲಿ ಈ ಎರಡೂ ಜಾತಿಗಳ ಸ್ಥೈರ್ಯ ಹಾನಿಯಾಗಿ ಸ್ಪಷ್ಟವಿದೆ. ದುರ್ಬಲತೆಯ ಮೂಲಕ ಶರಣು ಬರುವದರಿಂದ ಭಾವೀಪ್ರಜೆಗಳಲ್ಲಿ ಪರಸ್ಪರ ದ್ವೇಷ ಮತ್ತು ಶತ್ರುತ್ವಕ್ಕೆ ಅವಕಾಶವುಂಟಾಗುತ್ತದೆ. ಹಿಂದುಗಳು ಮುಸಲ್ಮಾನರನ್ನು ಹತ್ತಿಕ್ಕಲಿ ಇಲ್ಲವೆ ಮುಸಲ್ಮಾನರು ಹಿಂದುಗಳನ್ನು ಹತ್ತಿಕ್ಕಲಿ ಅವರು ದ್ವೇಷ ಬೀಜವನ್ನು ಬಿತ್ತುವರು.

ಭ್ರಾತೃಹತ್ಯೆಯು ಒಲೆತ ಹಿಂದುಸ್ತಾನಕ್ಕೆ ಹಿಂದಿನಿಂದ ಬಂದ ಒಂದು ರೋಗವು. ಮಹಾಭಾರತದ ಕಾಲದಲ್ಲಿಯೇ ಅದನ್ನು ಕಾಣಬಹುದು. ಬ್ರಿಟಿಶರಾಳಿಕೆಯ ವಶೀಕರಣ ವಿದ್ಯೆಯ ಪರಿಣಾಮವಾಗಿ ಇದು ಕೆಲಕಾಲ ಹತ್ತಿಕ್ಕಲ್ಪಟ್ಟಿತ್ತು. ನಾವು ಆತ್ಯಂತಿಕ ಅಹಿಂಸಾವಾದಿಗಳೆಂದು ತಿಳಿಯುವಷ್ಟು ಈ ವಶೀಕರಣವು ಯಶಸ್ವಿಯಾಗಿತ್ತು. ಇದು ಮಾಯವಾದಕೂಡಲೆ ನಾವು ಪರಸ್ಪರರ ಕೊಲೆಗಾಗಿ ದ್ವಿಗುಣಿತ ಉತ್ಸಾಹದಿಂದ ಉರಿದೆದ್ದಿದ್ದೇವೆ. ಜಗತ್ತಿನಲ್ಲಿಯ ಅತ್ಯಂತ ಪಾಶವೀ ಜನರಿಗಿಂತ ನಾವು ಶ್ರೇಷ್ಠರಾಗಿರುವೆವೆಂಬದನ್ನೇನೂ ನಾವು ತೋರ್ಪಡಿಸಿಲ್ಲ.

ಹಿಂದು, ಮುಸಲ್ಮಾನ ಇಲ್ಲವೆ ಶೀಖರು ಒಬ್ಬರಿಗಿಂತ ಇನ್ನೊಬ್ಬರು ಶ್ರೇಷ್ಠರೆಂಬ ಭ್ರಮೆಯನ್ನು ನಾವು ಬಿಟ್ಟಾಗಲೆ ನಮ್ಮ ಸ್ವಂತದ ಸುಧಾರಣೆಗಾಗಿ ನಿಷ್ಪಕ್ಷಪಾತವಾಗಿ ಆತ್ಮನಿರೀಕ್ಷಣೆ ಮಾಡಿಕೊಳ್ಳುವ ಮತ್ತು ನಾವೆಲ್ಲ ಒಂದುಗೂಡಬೇಕೆಂಬ ಪ್ರಬಲ ಆಕಾಂಕ್ಷೆ ನಮ್ಮಲ್ಲಿ ಉಂಟಾಗುವದು.

ಮುಂಬಯಿ

೧೮-೯-೪೮ ಕಿ. ಘ. ಮಶ್ರೂವಾಲಾ

# ಜಗತ್ತು ಒಂದು

## "ದಿಲ್ಲಿ" ಯುದ್ಧನೌಕಾ

ಮುಂಬಯಿಯು "ದಿಲ್ಲಿ" ಎಂಬ ಯುದ್ಧನೌಕೆ ಕಡೆಯಿಂದ ಸಮಾರಂಭವನ್ನು ಈ ವಾರ ಜರುಗಿಸಿತು. ಜಗತ್ತಿನ ಪ್ರತಿಯೊಂದು ರಾಷ್ಟ್ರವೂ ಯುದ್ಧವನ್ನು ನಿರಾಕರಿಸಲು ಯತ್ನಿಸುತ್ತಿದೆ. ಆದರೆ ಪ್ರತಿರಾಷ್ಟ್ರವೂ ಸ್ವಸಂರಕ್ಷಣೆಗಾಗಿ ಸುಸಜ್ಜಿತವಾಗುತ್ತಿರುವದಲ್ಲದೆ ಆಕ್ರಮಣಕಾರ್ಯ ಅನಿವಾರ್ಯವಾಗುತ್ತಿದೆ. ಯಾಕಂದರೆ ಆಕ್ರಮಣವು ಸ್ವಸಂರಕ್ಷಣೆಯ ಸರ್ವೋತ್ಕೃಷ್ಟ ಉಪಾಯ. ಹೀಗಿದ್ದರೂ ಪ್ರತಿರಾಷ್ಟ್ರವೂ ಸ್ವಸಂರಕ್ಷಣೆಗಾಗಿ ತನಗೆ ಬೇಕಾಗುವ ವಿಧ್ವಂಸಕ ಉಪಕರಣಗಳನ್ನು ಸ್ವತಃ ಹುಟ್ಟಿಸಿಕೊಳ್ಳುವಷ್ಟು ಬೆಳೆದು ನಿಂತಿಲ್ಲ. ಅದ್ದರಿಂದ ಅವು ಅವುಗಳನ್ನು ಬೇರೆ ರಾಷ್ಟ್ರಗಳ ಸರಕಾರಗಳಿಂದಲೋ ಉದ್ದಿಮೆದಾರರಿಂದಲೋ ಕೊಂಡುಕೊಳ್ಳುತ್ತವೆ.

ಒಬ್ಬನು ಒಂದು ಪದಾರ್ಥವನ್ನು ಉತ್ಪಾದಿಸಿದ್ದಾದರೆ ಹಿಂದಿಲ್ಲೊಂದುದಿನ ಅದನ್ನು ಉಪಯೋಗಿಸಿಕೊಳ್ಳಬೇಕೆಂಬ ಆಶೆ ಅವನಲ್ಲಿ ಉಂಟಾದರೇನಾಶ್ಚರ್ಯ? ಬಾಂಬು, ಬಂದೂಕು, ಶಸ್ತ್ರ ಸಜ್ಜಿತವಾಹನ ಇವನ್ನು ಕಲ್ಪಾಂತದವರೆಗೆ ಕೇವಲ ಉಗ್ರಾಣದಲ್ಲಿಟ್ಟರೆಂದು ಉತ್ಪಾದಿಸಲಾಗುತ್ತದೆಯೆ? ಹಾಗಿದ್ದಲ್ಲಿ ಶಸ್ತ್ರಾಸ್ತ್ರಗಳ ವ್ಯಾಪಾರವು ಕೆಲ ದಿನಗಳಲ್ಲಿ ನಿಂತುಬಿಡಬೇಕು. ಹಾಗಿಲ್ಲವೆಂದ ಮೇಲೆ ಪ್ರತಿಯೊಂದು ವಿಧ್ವಂಸಕ ಶಸ್ತ್ರಕ್ಕೂ "ನೀನು ಸಂಹರಿಸು" ಎಂಬ ಮಂತ್ರವನ್ನು ಆವಾಹಿಸಿಯೇ ಅದನ್ನು ಅಟ್ಟಲಾಗುತ್ತಿದೆ ಎಂದಂತಾಯ್ತು. ಈ ಮಂತ್ರವು ಪ್ರೇರಿತ ಕಾರ್ಯವನ್ನು ಎಸಗಲೇಬೇಕು. ಹೀಗಾದರೆ ಶಸ್ತ್ರೋತ್ಪಾದನದಿಂದೆಲ್ಲಿಯಾದರೂ ಯುದ್ಧದ ಮುಕ್ತಾಯವಾದೀತೆ ?

ಅದಿರಲಿ, ಶಾಂತಿಸ್ಥಾಪನೆಯ ಇಚ್ಛೆಯು ಅಷ್ಟು ಸತ್ಯವಾಗಿದ್ದರೆ ವಿಧ್ವಂಸಕ ಶಸ್ತ್ರಾಸ್ತ್ರಗಳನ್ನು ಒಂದು ದೇಶವು ಇನ್ನೊಂದು ದೇಶಕ್ಕೆ ಮಾರುವದಾಗಲಿ ಒಂದು ದೇಶವು ಇನ್ನೊಂದು ದೇಶದಿಂದ ಕೊಳ್ಳುವದಾಗಲಿ ಯುಕ್ತವಲ್ಲ. ಶಸ್ತ್ರಹೀನರಾಗಿರುವದು ದೇಶಕ್ಕೆ ಗಂಡಾಂತರಪ್ರಾಯವೆಂದು ಹೆದರಿಕೆಯೆನಿಸಿದರೆ ಆಯಾ ದೇಶಗಳು ವಿದೇಶೀಯರ ಸಹಾಯವಿಲ್ಲದೆ ತಮತಮಗೆ ಬೇಕಾದ ಶಸ್ತ್ರಾಸ್ತ್ರಗಳನ್ನು ತಮ್ಮಲ್ಲಿಯೇ ಉತ್ಪಾದಿಸಿಕೊಳ್ಳುವದವಶ್ಯ. ಯಾಕಂದರೆ ಕಾಲಾಂತರದಲ್ಲಿ ದೇಶವು ಶಸ್ತ್ರಾಸ್ತ್ರಗಳನ್ನು ಪೂರೈಸಲು ಸಮರ್ಥವಾದ ಸರಕಾರದ ಸೊತ್ತಾಗಿರುವದೂ ಅವಶ್ಯವೇ.

ಮುಂಬಯಿ ೧೬-೯-೧೯೪೮

## ಖಾದಿ ಸಪ್ತಾಹ

ಹರಿಜನ ಪತ್ರಿಕೆಯು ಪ್ರಕಟವಾಗುವ ದಿನ (೨೬-೯-೪೮) ಖಾದಿ ಸಪ್ತಾಹವು ಪ್ರಾರಂಭವಾಗುತ್ತದೆ. ಮತ್ತು ಇಂಗ್ಲೀಷ ಎಣಿಕೆಯಂತೆ ಗಾಂಧೀ ಜಯಂತಿಯಾದ ಅಕ್ಟೋಬರ ೨ ನೇ ತಾ. ನ ವರೆಗೆ ಅದನ್ನು ಆಚರಿಸಲಾಗುವದು. ಚರಖಾ ದ್ವಾದಶಿಯು, ಅಂದರೆ ಹಿಂದು ಪಂಚಾಂಗದಂತೆ ಗಾಂಧೀಜಿಯ ಜನ್ಮ ದಿನವು ಶುಕ್ರವಾರ ಸಪ್ಟೆಂಬರ ೩೦ ನೇ ತಾ. ನ ದಿನ ಆಗುತ್ತದೆ. ಹಿಂದು ಎಣಿಕೆಯ ಪದ್ಧತಿಯಂತೆ ಅಂದು ಗಾಂಧೀಜಿಯ ೮೦ ನೆಯ ವರ್ಷ ಮೊದಲಾದುದಾಗಿ ಅದು ಅವರ ೮೦ ನೆಯ ಹುಟ್ಟುಹಬ್ಬ. ಆಂಗ್ಲ ಪದ್ಧತಿಯಂತೆ ಅವರ ೭೯ ವರ್ಷ ಮುಗಿದವಾಗಿ ಅದು ಅವರ ೭೯ ನೆಯ ಹುಟ್ಟುಹಬ್ಬ. ಕಾಂಗ್ರೆಸ ಅಧ್ಯಕ್ಷರೂ ಅ. ಭಾ. ಚ. ಸಂ. ಅಧ್ಯಕ್ಷರೂ ಈ ಸಪ್ತಾಹವನ್ನು ಹೇಗೆ ಆಚರಿಸಬೇಕೆಂಬ ಬಗ್ಗೆ ಸೂಚನೆಗಳನ್ನು ಪ್ರಕಟಿಸಿಯೇ ಇದ್ದಾರೆ. ಅವರ ವಿಜ್ಞಾಪನೆಯನ್ನು ಜನರೆಲ್ಲ ಸ್ವಾಗತಿಸುವರೆಂದೂ ಅದರಂತೆ ಆಚರಿಸುವರೆಂದೂ ನಾನು ಆಶಿಸುತ್ತೇನೆ. ಗಾಂಧೀಜಿಯ ಕಾರ್ಯಕ್ರಮಗಳನ್ನು ಅನುಸರಿಸುವ ಮೂಲಕ ಮತ್ತು ನಮ್ಮ ನಿತ್ಯ ಜೀವನದಲ್ಲಿ ಅವನ್ನು ಅಳವಡಿಸಿಕೊಳ್ಳುವ ಮೂಲಕ ಮಾತ್ರ ನಾವು ಗಾಂಧೀಜಿಯ ನೆನಹನ್ನೂ ಸಂದೇಶಗಳನ್ನೂ ಜೋಪಾನವಾಗಿರಿಸಿಕೊಳ್ಳಬಲ್ಲೆವು. ಗಾಂಧೀಜಿಯ ಬಗ್ಗೆ ವೈಯಕ್ತಿಕ ನೆನಹುಗಳಿದ್ದವರೆಲ್ಲ ಇಂದಿಲ್ಲ ನಾಳೆಯಾದರೂ ಅವರ ತತ್ವಗಳನ್ನು ಅನುಸರಿಸುವರು. ಅವರ ಬಗ್ಗೆ ಇದ್ದ ನೆನಹುಗಳು ಕಾಲಾನುಕ್ರಮದಲ್ಲಿ ಮಸುಳಿಸಬಹುದು ವಿಪರ್ಯಸ್ತವೂ ಆಗಬಹುದು. ಇದರಂತೆಯೇ ಗಾಂಧೀಜಿಯ ಫೋಟೋಗಳಿದ್ದರೂ ಬರಬರುತ್ತ ಅವರ ಚಿತ್ರಿತ ಮೂರ್ತಿಯು ಕೂಡ ವಿಪರ್ಯಸ್ತವಾಗಿ ಹೋಗುವ ಸಂಭವವಿದೆ. ಅದ್ದರಿಂದ ಅವರ ಸಂದೇಶವನ್ನು ನಮ್ಮ ಜೀವನದಲ್ಲಿ ಸಮರಸಗೊಳಿಸಿಕೊಳ್ಳುವದೇ ಸರಿಯಾದ ಜಯಂತಿಯಾಗಬಲ್ಲದು. —ಕಿ. ಘ. ಮ.

ವರ್ಧಾ ೧೩-೯-೪೮

ಸಂಪರ್ಕದ ಹೊಸ ಶೀಘ್ರ ಸಾಧನಗಳು ಬಳಕೆಗೆ ಬಂದಿರುವದರಿಂದ ಜಗತ್ತಿನ ಪರಿಣಾಮ ಕುಗ್ಗಿದೆಯೆಂದೂ ಅದರಿಂದ ಜಗತ್ತು ಇಂದು ಹಲವು ಘಟಕಗಳ ಮಾಲೆಯಾಗಿ ಉಳಿಯದೆ ಒಂದೇ ಘಟಕವಾಗಿ ಮಾಡಲ್ಪಟ್ಟಿದೆಯೆಂದೂ ಪದೇ ಪದೇ ಕೇಳಬರುತ್ತಿದೆ. ಭೌಗೋಲಿಕ ಸಮಾವೇಶವಿಲ್ಲದೆಯೇ ಐಕ್ಯವನ್ನು ಸಾಧಿಸಬಹುದು. ಇಬ್ಬರಲ್ಲಿ ಸಂಪೂರ್ಣ ಐಕ್ಯವಿದೆಯೆನ್ನುವಾಗ, ಅವರ ದೇಹಗಳು ಒಂದಾಗಿವೆಯೆಂದು ತಾತ್ಪರ್ಯವಲ್ಲ; ಅವರ ಅಂತಸ್ತತ್ವಗಳು, ಅವರ ವಿಚಾರಧಾರೆಗಳು, ಅವರ ಆಧ್ಯಾತ್ಮಿಕ ವಿಕಾಸ, ಒಂದಾಗಿವೆಯೆಂದೂ ಮೈಯೆರಡಾದರೂ ಮನವೊಂದೆಂದೂ ನಮ್ಮ ಅಭಿಪ್ರಾಯವಾಗಿರುತ್ತದೆ. ಬೇರೆ ಬೇರೆ ವಲಯಗಳ ಎಲ್ಲ ಜನಾಂಗಗಳೂ ಒಂದೇ ಶಾಸನಕ್ಕೆ ಒಳಗಾಗಿ ತಮ್ಮ ತಮ್ಮ ವ್ಯಕ್ತಿವೈಶಿಷ್ಟ್ಯಗಳನ್ನು ಕಳಚಿ ಒಗೆಯುವದು ಜಗತ್ತಿನ ಐಕ್ಯಕ್ಕೆ ಅವಶ್ಯವೂ ಅಲ್ಲ, ಅದರಿಂದ ಐಕ್ಯ ಸಾಧಿಸುವಂತೆಯೂ ಇಲ್ಲ. ಜಗತ್ತಿನ ಐಕ್ಯ ನಮ್ಮ ಗುರಿಯಾಗಿದ್ದರೆ, ಯಾವ ಅಂಶಗಳಲ್ಲಿ ವೈಷಮ್ಯವಿದ್ದರೆ ತಾವಾಗಿ ವೈಮನಸ್ಯಗಳು ಉದ್ಭವಿಸಬಹುದೋ ಅಂಥವುಗಳಲ್ಲಿ ಸಾಮರಸ್ಯ, ಐಕ್ಯ ಇರುವಂತೆ ನಾವು ನೋಡಿಕೊಳ್ಳಬೇಕು ಇಬ್ಬರ ದೇಹಗಳು ಒಂದಕ್ಕೊಂದು ಬಿಗಿಯಲ್ಪಟ್ಟರೆ ಎರಡಕ್ಕೂ ತೀರ ಆತಂಕವೇ ಸರಿ. ದೇಹಾರೋಗ್ಯಕ್ಕಾಗಿಯೂ ಸಾಮಾಜಿಕ ಕಾರ್ಯಗಳಿಗಾಗಿಯೂ ಬೇಕಾದಂತೆ ಓಡಾಡಲು ಇಬ್ಬರಿಗೂ ಪರಿಪೂರ್ಣ ಸ್ವಾತಂತ್ರ್ಯವಿರಬೇಕು; ಆದರೆ ಅದರ ಸಂಗಡಲೇ, ಮನಸ್ಸಿನ ಐಕ್ಯ, ಧ್ಯೇಯದ ಐಕ್ಯ, ಕರ್ಮದ ಐಕ್ಯ ಇರಬಲ್ಲದು. ನಿಜವಾಗಿ ಮೈಯೊಂದಾಗಿರುವದಕ್ಕಿಂತ ಮನವೊಂದಾಗಿರುವದೇ ಹೆಚ್ಚಿನದು.

ಆರ್ಥಿಕ ದೃಷ್ಟಿಯಿಂದ ಈಗ ಜಗತ್ತು ಒಂದೇ ಆಗಿದೆಯೆಂದೂ ಅದರಿಂದ ನಮ್ಮ ಆರ್ಥಿಕ ಸಂಘಟನೆಗಳೆಲ್ಲವೂ ಒಂದಾಗಿ ಲೀನಗೊಂಡು ಯಾವೊಂದು ಘಟಕಕ್ಕೂ ಪೂರ್ಣ ಸ್ವಾವಲಂಬಿತ್ವವಿಲ್ಲದಂತಾಗಬೇಕೆಂದೂ ಪದೇ ಪದೇ ಕೇಳಿಬರುತ್ತಿದೆ. ದೈಹಿಕ ಐಕ್ಯ ಬೇಕೆಂಬ ವಾದ ಹೇಗೋ ಹಾಗೆಯೆ ಈ ವಾದವೂ ಒಂದು ಹೇತ್ವಾಭಾಸವೇ. ಜಗತ್ತಿನಲ್ಲಿರುವ ವೈಮನಸ್ಯಗಳಿಗೆ ಮುಖ್ಯವಾಗಿ ಆರ್ಥಿಕ ವೈಷಮ್ಯಗಳೂ ಅವುಗಳಿಂದ ಹುಟ್ಟಿದ ಧ್ಯೇಯಾತ್ಮಿಕ ವಿವಾದಗಳೂ ಕಾರಣವಾಗಿವೆ. ಆದುದರಿಂದ ನಮ್ಮ ಗುರಿ ಜಾಗತಿಕ ಐಕ್ಯವಾಗಿದ್ದರೆ, ಈ ವೈಷಮ್ಯಗಳನ್ನು ತೊಡೆದು, ಆರ್ಥಿಕ ಪ್ರಯತ್ನಗಳು ಒಂದಕ್ಕೊಂದು ಹೊಂದಿಕೆಯಾಗುವಂತೆ ಮಾಡಲು ಹೆಣಗುವದು ಅವಶ್ಯ.

ಒಂದು ಸಂಘಟಕದಲ್ಲಿ ವೈಯಕ್ತಿಕ ಮತ್ತು ದೈಹಿಕ ಸ್ವಾತಂತ್ರ್ಯದ ಭರವಸೆಯಿರುವದು ಹೇಗೆ ಅವಶ್ಯವೊ ಹಾಗೆಯೇ ಪ್ರತಿಯೊಂದು ರಾಷ್ಟ್ರವೂ ತನ್ನ ಮೂಲಭೂತ ಅವಶ್ಯಕತೆಗಳ ವಿಷಯದಲ್ಲಿ ಸ್ವಯಂಪೂರ್ಣವಾಗುವದೂ ಅವಶ್ಯ. ಹಾಗೆ ನಾವು ವ್ಯವಸ್ಥೆ ಮಾಡಬಲ್ಲೆವಾದರೆ ಎಷ್ಟೋ ಕೆಲಸ ಸಾಧಿಸಿದಂತಾಗುವದು. ಅನ್ನ, ವಸ್ತ್ರ ಮತ್ತು ವಸತಿ ಇವುಗಳ ವಿಷಯದಲ್ಲಿ ಎಷ್ಟು ಮಟ್ಟಿಗೆ ವ್ಯವಹಾರ ಸಾಧ್ಯವೊ ಅಷ್ಟು ಮಟ್ಟಿಗೂ ನಾವು ಸ್ವತಂತ್ರವಾಗಿ ಉಳಿಯಬೇಕು. ಇಲ್ಲದೆ ಹೋದರೆ ಅಸೂಯೆ, ಮತ್ಸರ, ದ್ವೇಷ ಇವುಗಳಿಗೆಡೆಯಾಗಿ ಕೊನೆಗೊಮ್ಮೆ ಜಾಗತಿಕ ರಣಯಜ್ಞದಲ್ಲಿ ಪರಿಣಮಿಸುವಂತಾಗುವದು.

ಹಿಂದುಸ್ತಾನ ಎಂದಿನಿಂದಲೂ ಕೃಷಿಪ್ರಧಾನ ದೇಶವಾಗಿತ್ತು, ಎಂದೆಂದಿಗೂ ಹಾಗೆಯೆ ಉಳಿಯಲೆಂದು ನಮ್ಮ ಹಾರೈಕೆ. ಇನ್ನೊಬ್ಬರ ಮುಂದೆ ಭಿಕ್ಷಾಪಾತ್ರೆಯನ್ನೊಡ್ಡದೆ ತನಗೆ ಬೇಕಾದುದನ್ನೆಲ್ಲ ಅದು ತಾನೆ ಉತ್ಪಾದಿಸಿಕೊಳ್ಳುವಂತಾಗಲಿ. ಈಗ ಮಾತ್ರ, ಅಯೋಗ್ಯ ಆರ್ಥಿಕ ಸಿದ್ಧಾಂತಗಳ ಬೆನ್ನುಹತ್ತಿರುವ ನಮ್ಮ ಈ ಆರ್ಥಿಕ ಸಂಘಟನೆ ಕುಸಿದು ಬೀಳುವ ಲಕ್ಷಣಗಳು ಕಾಣತೊಡಗಿವೆ. ವಿವೇಕದ ದೃಷ್ಟಿಯಿಂದ ಪ್ರಥಮ ಪ್ರಾಧಾನ್ಯವಿಲ್ಲದ ಕಚ್ಚಾ ಸಾಮಗ್ರಿಗಳನ್ನು ಹಿಂದುಸ್ತಾನ ಉತ್ಪಾದಿಸುತಿದೆ. ಈ ಕ್ಷಣ ನಾವು ವಿದೇಶಗಳಿಂದ ಸಾಧಾರಣ ಪ್ರಮಾಣದಲ್ಲಿ ಆಹಾರ ಧಾನ್ಯಗಳನ್ನು ತರಿಸುತಿದ್ದೇವೆ. ಇದರಿಂದ ಅಂಥ ಧಾನ್ಯಗಳ ಪೋಷಣಶಕ್ತಿ ಸ್ವಾಭಾವಿಕವಾಗಿ ಕುಗ್ಗುತ್ತದೆ. ಉದಾಹರಣೆಗಾಗಿ, ಭತ್ತವನ್ನು ದೂರದೇಶಗಳಿಗೆ ಸಾಗಿಸಬೇಕಾದರೆ, ಅದರ ಹೊಟ್ಟಿಗೆ ಬೇಕಾಗುವ ಸ್ಥಳ, ಅದರ ಭಾರ ಇವುಗಳ ಕಾರಣದಿಂದ ಸಾಗಿಸುವ ವೆಚ್ಚ ಬಹಳ ಬರುವದರಿಂದ ಈ ತೊಂದರೆಯನ್ನು ಪರಿಹರಿಸುವದಕ್ಕಾಗಿ ಭತ್ತವನ್ನು ಗಿರಣಿಯಲ್ಲಿ ಕುಟ್ಟಿಸಲಾಗುವದು ಅದು ಹಸನಾಗಿ ತೊಳಸಿದ (ಪಾಲಿಶ ಮಾಡಿದ) ಅಕ್ಕಿಯಾಗಿ ಬರುತ್ತದೆ. ಮೊದಲೇ ಪೋಷಣೆ ಸರಿಯಾಗಿಲ್ಲದ ದೇಶದಲ್ಲಿ ತೊಳಸಲು ಅಕ್ಕಿಯೆಂದರೆ ಶುದ್ಧ ಗಂಡಾಂತರವೇ ಸೈ. ಅದು ಕೇವಲ ಪಿಷ್ಟಪದಾರ್ಥ, ತೌಡು, ಜೀವಾಣುಗಳು ಮತ್ತು ಇತರ ಕೊಬ್ಬುಗಳು ಹಾಗು ಖನಿಜಗಳು ಗಿರಣಿಯಲ್ಲಿ ನಾಶವಾಗುವದರಿಂದ ಅದರ ಸಾರ ಕಡಿಮೆಯಾಗಿರುತ್ತದೆ. ಅದರಿಂದ ಸಾಧ್ಯವಾದ ಮಟ್ಟಿಗೂ ಆಹಾರವಸ್ತುಗಳು ಆಯಾ ಸ್ಥಳಗಳಲ್ಲಿ ಉತ್ಪಾದಿಸಲ್ಪಡಬೇಕು. ಇದರಂತೆಯೆ ಇತರ ವಿಚಾರಗಳನ್ನು ಭಾವಿಸಿದರೆ ವಸ್ತ್ರವೂ ವಸತಿ ನಿರ್ಮಾಣಕ್ಕೆ ಬೇಕಾದ ವಸ್ತುಗಳೂ ಸ್ಥಳೀಯ ಉದ್ಪಾದನೆಯದೆ ಆಗಿರಬೇಕೆಂಬ ಸಿದ್ಧಾಂತಕ್ಕೆ ನಾವು ಬರ್ಲುವೆವು. ಅಂತರ್‌ರಾಷ್ಟ್ರೀಯ ವ್ಯಾಪಾರ ವ್ಯವಹಾರಗಳು ವಿಲಾಸ ಸಾಮಗ್ರಿಗಳಲ್ಲಿ ಮತ್ತು ತಂತಮ್ಮ ದೇಶಗಳಿಗೆ ಸಾಕಾಗಿ ಉಳಿಯಬಹುದಾದ ಮೂಲಭೂತ ಸರಕುಗಳಲ್ಲಿ ಮಾತ್ರ ಸಾಗಬಲ್ಲದು.

ಈಚೆಗೆ ಲಂಡನ್ನಿನಲ್ಲಿ ಸೇರಿದ ಪತ್ರಿಕಾ ಪರಿಷತ್ತೊಂದರಲ್ಲಿ ವಾಣಿಜ್ಯ ಮಂಡಲದ ತಂಬಾಕಿನ ಸಲಹೆಗಾರರಾದ ಸರ್ ಆಲೆಗ್ಝಾಂಡರ ಮ್ಯಾಕ್ಸವೆಲ್ಲರು ಹೇಳಿದ್ದು: "ತಂಬಾಕಿಗಾಗಿ ನಾವು ಇನ್ನು ಹೆಚ್ಚು ಡಾಲರುಗಳನ್ನು ವೆಚ್ಚ ಮಾಡಲಾರೆವೆಂಬದು ಹೆಚ್ಚುಹೆಚ್ಚು ಸ್ಪಷ್ಟವಾಗುತ್ತಿರುವದರಿಂದ ನಾವು ಸಾಧ್ಯವಿದ್ದಷ್ಟು ಬೇರೆ ಕಡೆಗಳಿಂದ ಪೂರೈಕೆ ಮಾಡಿಕೊಳ್ಳುವ ವಿಚಾರ ನಡೆಸಿದ್ದೇವೆ." ಆದರೂ ಸಿಗರೇಟುಗಳನ್ನು ಸೀದಾ ಪದ್ಧತಿಯಿಂದ ಹಂಚಲು ಅವರಿಗೆ ಮನಸ್ಸಿಲ್ಲ. ಈ ಧೂಮಪಾನದ ಚಟ ಬ್ರಿಟನ್ನಿನಲ್ಲಿ ಎಷ್ಟು ಹೆಚ್ಚಿಕೊಂಡಿದೆಯೆಂದರೆ ಅವರು ಕೆಲವೊಂದು ಆಹಾರ ವಸ್ತುಗಳಿಗಿಂತಲೂ ಸಿಗರೇಟುಗಳಿಗೆ ಪ್ರಾಶಸ್ತ್ಯ ಕೊಡುವರು. ಪರಿಣಾಮವಾಗಿ ಬ್ರಿಟನ್ನು ಹಿಂದುಸ್ತಾನದ ಕಡೆಗೆ ದೃಷ್ಟಿಯನ್ನು ತಿರುಗಿಸಿತು ಮತ್ತು ಹಿಂದುಸ್ತಾನ ಸರಕಾರದ ಪರವಾಗಿ ಕೃಷಿಕನಿಗೆ ವರ್ಜೀನಿಯಾ ತಂಬಾಕಿನ ಬೀಜಗಳನ್ನು ಒದಗಿಸಿ ಆಹಾರ ಬೆಳೆಯಬಹುದಾದ ಕ್ಷೇತ್ರದಲ್ಲಿ ತಂಬಾಕು ಬೆಳೆಸುವಂತೆ ಮಾಡುವ ಪ್ರಯತ್ನಗಳಾಗುತ್ತಿವೆ. ಇದರರ್ಥ, ನಾವು ತಂಬಾಕನ್ನು ನಿರ್ಯಾತ ಮಾಡಿ ಅಕ್ಕಿಯನ್ನು ಆಯಾತ ಮಾಡಿಕೊಳ್ಳುತಿದ್ದೇವೆಂದು ಇದು ಅಸ್ಥಿರವಾದ ಸಮತೂಕ. ಅದನ್ನು ಯಾವ ಸ್ವಾಭಿಮಾನಿ ರಾಷ್ಟ್ರವೂ ಸೈರಿಸಲಾರದು. ನಮ್ಮ ದೇಶದಲ್ಲಿ ಆಹಾರ ಸಾಮಗ್ರಿಗಳ ಕೊರತೆಯಿರುವಷ್ಟು ಕಾಲ ನಮ್ಮ ಹೊಲಗಳಲ್ಲಿ ಪ್ರಥಮ 'ಪ್ರಾಶಸ್ತ್ಯ ಆಹಾರ ಧಾನ್ಯಗಳಿಗೇ ದೊರೆಯತಕ್ಕದ್ದು. ಇಂಪೀರಿಯಲ್ ಟೊಬ್ಯಾಕೋ ಕಂಪನಿಯವರ ಉಪಯೋಗಕ್ಕೆ ಇನ್ನಷ್ಟು ಭೂಮಿಯನ್ನು ನೀಡುವ ಮೊದಲು ನಮ್ಮ ಪ್ರಾಂತಿಕ ಸರಕಾರಗಳು ಇನ್ನೆಲ್ಲ ವಿಚಾರಿಸುವರೆಂದು ನಂಬಿದ್ದೇವೆ.

ಸಾಮಾನ್ಯ ಪ್ರಜೆಗಳ ಸುಖವನ್ನು ಹೆಚ್ಚಿಸುವ ಸಲುವಾಗಿ ಸಕಲ ರಾಷ್ಟ್ರಗಳ ಹಿತಸಂಬಂಧಗಳನ್ನು ಒಂದು ಗೂಡಿಸಬಲ್ಲ ವಿಶಾಲ ದೃಷ್ಟಿಯನ್ನಿಟ್ಟುಕೊಂಡು ಜನರ ಮೂಲಭೂತ ಅವಶ್ಯಕತೆಗಳ ಪೂರೈಕೆ ಸುರಕ್ಷಿತವಾಗಿರುವಂತೆ ಒಂದು ಆರ್ಥಿಕ ವ್ಯವಸ್ಥೆಯನ್ನು ಸಂಘಟಿಸದಿದ್ದರೆ, ಯುಕ್ತರಾಷ್ಟ್ರಸಂಘ, ಹಿಂದಿನ ರಾಷ್ಟ್ರಸಂಘ ಮೊದಲಾದ ಸಂಘಾತ್ಮಕ ಉಪಾಯಗಳಿಂದ ಜಗತ್ತಿನಲ್ಲಿ ಐಕ್ಯವುಂಟಾಗುವದು ಸಾಧ್ಯವಿಲ್ಲ. ಅವು ತಂತಾನೇ ಐಕ್ಯವನ್ನು ನಿರ್ಮಿಸಲಾರವು.

—ಜೆ. ಸಿ. ಕುಮಾರಪ್ಪ.

---

## ಪಾಕಿಸ್ತಾನದಲ್ಲಿ ಆರ್‌ಎಸ್‌ಎಸ್ ಅಧ್ಯಕ್ಷರಿಗೆ ಕರಿನೀರಿನ ಶಿಕ್ಷೆ

ಸಿಂಧ ಪ್ರಾಂತಿಕ ಆರ್. ಎಸ್. ಎಸ್. ದ ಅಧ್ಯಕ್ಷರಾದ ೭೧ ವರ್ಷದ ಬ್ಯಾ. ಖಾನಚಂದ ಗೋಪಾಲದಾಸ ಹಾಗು ಈ ಸಂಘದ ತರುಣ ನಂದನ ಎಂಬವರಿಗೆ ಶಿಕಾರಿಪುರ ಬಾಂಬ ಖಟ್ಲೆಯ ವಿಶೇಷ ನ್ಯಾಯಾಧೀಶರಾದ ರಹೀಮುಬಕ್ಷ ಮುನಶಿಯವರು ತಾ. ೧೭ ಕ್ಕೆ ಅನುಕ್ರಮವಾಗಿ ಜೀವಾವಧಿ ಕರಿನೀರಿನ ಶಿಕ್ಷೆ ೫೦ ಸಾವಿರ ರೂ. ದಂಡ ಹಾಗು ತರುಣ ಕಾರ್ಯಕರ್ತನಿಗೆ ೨೦ ಸಾವಿರ ರೂಪಾಯಿ ದಂಡ ವಿಧಿಸಿದರು. ಪಾಕಿಸ್ತಾನ ಸರಕಾರ ಬುಡಮೇಲು ಮಾಡುವ ಆರೋಪ ಇವರ ಮೇಲಿತ್ತು.

## ಖಾದೀ ಯೋಜನೆ

(ಅಗ್ರಲೇಖದಲ್ಲಿ ಉಲ್ಲೇಖಿಸಲ್ಪಟ್ಟ ಗಾಂಧೀಜಿಯ ಗೊತ್ತುವಳಿಯ ಕರಡು.)

ಹಿಂದುಸ್ತಾನ ಮತ್ತು ಮಲಯಾ ಮೊದಲಾದ ಜಗತ್ತಿನಲ್ಲಿಯ ಇತರ ಭಾಗಗಳಲ್ಲಿ ಇಂದು ಕಾಣಬರುತಿರುವ ಬಟ್ಟೆಯ ಕೊರತೆಯನ್ನು ಇಲ್ಲದಂತೆ ಮಾಡುವಂಥ ಶಕ್ತಿಯು ಚರಖಾ ಮತ್ತು ಕೈಮಗ್ಗಗಳಿಗೆ ಇದೆ ಎಂಬದಾಗಿ ಅಖಿಲ ಭಾರತ ಚರಖಾ ಸಂಘವು ಸ್ವಾನುಭವದಿಂದ ಹೇಳಬಲ್ಲುದಾಗಿದೆ. ಪ್ರಾಚೀನ ಕಾಲದಿಂದ ಕೈನೂಲು ಮತ್ತು ಕೈಮಗ್ಗಗಳಿಂದ ಖಾದಿಯನ್ನು ಉತ್ಪಾದಿಸುವ ದೇಶವು ಹಿಂದುಸ್ತಾನವೊಂದೇ ಆಗಿರುವದು. ಮತ್ತು ಇಂದಿನ ಜವಳಿ ಗಿರಣಿಗಳ ಯುಗದಲ್ಲಿಯೂ ಹಿಂದುಸ್ತಾನದಲ್ಲಿ ಅ. ಭಾ. ಚ. ಸಂಘದ ಮುಖಾಂತರ ಶುದ್ಧ ಖಾದಿಯನ್ನು ಉತ್ಪಾದಿಸಲಾಗುತಿದೆ. ಅಖಿಲ ಭಾರತ ಚರಖಾ ಸಂಘವು ಸಂಸ್ಥಾಪಿತವಾದ ಈ ಕಾಲು ಶತಕದ ಅವಧಿಯಲ್ಲಿ ಹಿಂದುಸ್ತಾನದಲ್ಲಿಯ ಬಡ ನೂಲುವವರು ಮತ್ತು ನೇಕಾರರಲ್ಲಿ ಸುಮಾರು ಏಳು ಕೋಟಿ ರೂಪಾಯಿಗಳನ್ನು ಕೂಲಿಯೆಂದು ಅದು ಹಂಚಿರುವದು.

ಇದೀಗ ಪ್ರತಿಯೊಂದು ಪ್ರಾಂತದಲ್ಲಿ ಹೊಣೆಗಾರ ಸರಕಾರ ಸ್ಥಾಪಿತವಾಗಿದ್ದರಿಂದ, ಶಕ್ಯವಿದ್ದಷ್ಟು ಬೇಗ ಖಾದೀ ಉತ್ಪಾದನೆಯ ಪ್ರಚಾರವನ್ನು ಭರದಿಂದ ಮಾಡುವದು ಪ್ರತಿಯೊಂದು ಪ್ರಾಂತೀಯ ಸರಕಾರದ ಕರ್ತವ್ಯವಾಗಿದೆ. ಕೇವಲ ನಗರಗಳಲ್ಲಿ ಮತ್ತು ಹಿಂದುಸ್ತಾನದ ಹೊರಗಿನ ಪ್ರದೇಶಗಳಲ್ಲಿ ಮಾತ್ರ ಗಿರಣಿಬಟ್ಟೆಯ ಪ್ರಚಾರಕ್ಕೆ ಅವಕಾಶ ಕೊಡಬಹುದಲ್ಲದೆ ಹಳ್ಳಿಗಳಲ್ಲಿ ಅದರ ಪ್ರವೇಶವಾಗದಂತೆ ನಿರ್ಬಂಧಪಡಿಸುವದು ಅವುಗಳ ಕರ್ತವ್ಯವಾಗಿದೆ. ಬಹಳಾದರೆ ಒಂದು ವರುಷದ ವರೆಗೆ ಗಿರಣಿ ಬಟ್ಟೆ ಹಳ್ಳಿಗಳನ್ನು ಪ್ರವೇಶಿಸಬಹುದು. ಆದರೆ ಅದೇ ಕಾಲಕ್ಕೆ ಪ್ರತಿಯೊಂದು ಹಳ್ಳಿಯಲ್ಲಿಯೂ ಖಾದಿಯ ಉತ್ಪಾದನೆಯಾಗುವಂತೆ ಯೋಜಿಸುವದು ಅವಶ್ಯವಾಗಿದೆ. ಪ್ರಾಂತೀಯ ಸರಕಾರಗಳು ಬಾಡಿಗೆಯಿಂದ ಇಲ್ಲವೆ ಸುಲಭವಾದ ಕಂತುಗಳಿಂದ ಹಣ ಮುಟ್ಟಿಸುವ ಕರಾರಿನಿಂದ ನೂಲುವ ಮತ್ತು ನೇಯುವ ಉಪಕರಣಗಳನ್ನು ಜನರಿಗೆ ಒದಗಿಸಿಕೊಡಬೇಕು. ಈ ಕಾರ್ಯಕ್ರಮವನ್ನು ಯಶಸ್ವಿಗೊಳಿಸಲು ಶಕ್ಯವಿದ್ದ ಎಲ್ಲ ಬಗೆಯ ಸಹಾಯ ಸಲ್ಲಿಸಲು ಅಖಿಲ ಭಾರತ ಚರಖಾ ಸಂಘವು ಮತ್ತು ಅದರ ಶಾಖೆಗಳು ಸಿದ್ಧವಿರುವವು.

ಗ್ರಾಮಗಳಲ್ಲಿಯ ಮತ್ತು ನಗರಗಳಲ್ಲಿಯ ಪ್ರತಿಯೊಂದು ಸಾಲೆಯಲ್ಲಿ ನೂಲುವ ಮತ್ತು ನೇಯುವ ಶಿಕ್ಷಣವನ್ನು ಪ್ರತಿದಿನ ಕನಿಷ್ಠ ಒಂದು ಗಂಟೆ ಕೊಡುವ ವ್ಯವಸ್ಥೆಯಾಗಬೇಕು; ಮತ್ತು ಶಕ್ಯವಿದ್ದ ಮಟ್ಟಿಗೆ ವಿದ್ಯಾರ್ಥಿ ವಿದ್ಯಾರ್ಥಿನಿಯರು ತಾವು ನೂತ ನೂಲನ್ನೇ ನೇಯುವಂತೆ ಶಿಕ್ಷಣ ಕೊಡತಕ್ಕದ್ದು.

ಖಾದಿ ಉತ್ಪಾದನೆಗೆ ಅವಶ್ಯವಾದ ವಾತಾವರಣವು ಹಬ್ಬುವಂತೆ ಪ್ರತಿಯೊಬ್ಬ ಕಾಂಗ್ರೆಸ್ಸಿಗನು ಶಕ್ತಿಮೀರಿ ಪ್ರಯತ್ನ ಮಾಡಬೇಕೆಂದು ಕಾಂಗ್ರೆಸ ಕಾರ್ಯಸಮಿತಿಯು ನಿರ್ಣಯ ಕೈಕೊಳ್ಳಬೇಕೆಂದು ಅ. ಭಾ. ಚ. ಸಂಘದ ವಿಶ್ವಸ್ತರು ಬಿನ್ನವಿಸಿಕೊಳ್ಳುತ್ತಾರೆ. ಈ ಮಹತ್ವದ ಕೆಲಸದಲ್ಲಿ ಗಿರಣಿಗಾರರೂ ತಮ್ಮ ಸಹಾಯವನ್ನು ನೀಡಬೇಕೆಂದು ಬಿನ್ನವಿಸಲಾಗುತ್ತದೆ. ಕೈನೂಲು ಮತ್ತು ಕೈಮಗ್ಗಗಳ ಪ್ರಸಾರ ಹೆಚ್ಚಿಗೆ ಆಗುವಂಥ ಕ್ಷೇತ್ರದಲ್ಲಿ ಗಿರಣಿಬಟ್ಟೆಯ ಪ್ರವೇಶವಾಗದಂತೆ ಸರಕಾರದವರು ಮತ್ತು ಗಿರಣಿಗಾರರು, ಚರಖಾಸಂಘದೊಡನೆ ವಿಚಾರವಿನಿಮಯ ಮಾಡಿ, ನೋಡಿಕೊಳ್ಳಬೇಕು. ಇದಲ್ಲದೆ ಯಾವ ಹೊಸ ಗಿರಣಿಗಳೂ ಅಸ್ತಿತ್ವದಲ್ಲಿ ಬರತಕ್ಕದ್ದಲ್ಲ ಮತ್ತು ಈಗಿದ್ದ ಗಿರಣಿಗಳಲ್ಲಿ ಯಾವ ಹೊಸ ಯಂತ್ರ ಯಂತ್ರೋಪಕರಣಗಳೂ ಬರತಕ್ಕದ್ದಲ್ಲ. ಸರಕಾರ ಮತ್ತು ಅ. ಭಾ. ಚ. ಸಂಘದ ಸಲಹೆ ಸೂಚನೆಗಳಂತೆ ಗಿರಣಿಗಳು ನಡೆಸಲ್ಪಡಬೇಕು, ಈ ಉದ್ದೇಶ ಸಾಧನೆಗಾಗಿ ಪ್ರಾಂತೀಯ ಸರಕಾರಗಳು ಇಂಥ ಕಾಯಿದೆಯನ್ನು ಮಾಡಬೇಕಲ್ಲದೆ ಅದನ್ನು ಜಾರಿಯಲ್ಲಿ ತರಬೇಕು.

(ಹಿಂದುಸ್ತಾನೀ ಮೂಲದಿಂದ ಅನುವಾದಿತ)

---

ಆಸಾಮದಲ್ಲಿಯ ಹತ್ತು ಜನ ಎ. ಆಯ. ಸಿ. ಸಿ. ಸದಸ್ಯರು ಕಾಂಗ್ರೆಸ ಅಧ್ಯಕ್ಷಪದಕ್ಕೆ ಆಸಾಮ ಪ್ರಾಂತದ ಮುಖ್ಯಮಂತ್ರಿ ಶ್ರೀ. ಗೋಪೀನಾಥ ಬಾರ್ಡೋಲಾಯಿ ಇವರ ಹೆಸರನ್ನು ಸೂಚಿಸಿದ್ದಾರೆ.

# ರೂಪರಂಗ

## ಭಕ್ತ ಧ್ರುವ

ಹೆಸರೇ ಹೇಳುವಂತೆ 'ಭಕ್ತಧ್ರುವ' ಒಂದು ಭಕ್ತ ಚರಿತ್ರೆ. ಜ್ಞಾನಕ್ಕಿಂತ ಭಕ್ತಿ ಹಿರಿದೆಂಬ ಅತಿಶಯೋಕ್ತಿಯನ್ನು ನಿದರ್ಶಿಸಲು ಹೊರಟ ಕಥೆ. ಈ ಕಥಾವಸ್ತು ಹೊಸದಲ್ಲ. ಹಿಂದೀಯರಿಗೆ ಜನಜನಿತವಾಗಿ ತಿಳಿದಂಥದು. ಈ ಕಥೆಯಲ್ಲಿ ಬರುವ ಮುಖ್ಯ ಪಾತ್ರಗಳೆಂದರೆ ಉತ್ತಾನಪಾದ, ಸುನೀತಿ, ಸುರುಚಿ, ಧ್ರುವ, ಉತ್ತಮ ಮತ್ತು ನಾರದ.

ಉತ್ತಾನಪಾದನು ಮಂದಮತಿಯಾದ ರಾಜ. ಸುನೀತಿಯು ಅವನಂತೆ ಪ್ರಜಾಕ್ಷೇಮ ಚಿಂತನದಿಂದ ಅವನಿಗೆ ೨ನೆಯ ಮದುವೆ ಮಾಡಿಸಿದ ತ್ಯಾಗಿ. ಆದರೆ ಈ ತ್ಯಾಗ ಅಂದಿನ ಸಾಮಾಜಿಕ ಮತ್ತು ರಾಜಕೀಯ ದೃಷ್ಟಿಯಿಂದ ಸಮಂಜಸವೆನಿಸಬಹುವಲ್ಲದೆ ಪ್ರಜಾಪ್ರಭುತ್ವದ, ಪ್ರೇಮಪಾವಿತ್ರ್ಯದ ಇಂದಿನ ಜ್ಞಾನಪ್ರೇಮ ದೃಷ್ಟಿಗಳಿಗೆ ಆದರ್ಶವೆನಿಸುವಂಥದಲ್ಲ. ವಂಶಕ್ಕೆ ಅತಿ ಪ್ರಾಧಾನ್ಯ ಕೊಡುವ ಮನುಷ್ಯರಲ್ಲಿ ಮಾತ್ರ ಅದು ನ್ಯಾಯವೆನಿಸಿತು; ರಾಜಪ್ರಭುತ್ವಕ್ಕೆ — ಅದರಲ್ಲೂ ಅದೇ ರಾಜನ ಮಗನೇ ರಾಜನಾಗಬೇಕೆಂಬ ಇಚ್ಛೆಗೆ— ಅದು ಯೋಗ್ಯವೆನಿಸಿತು.

ಸುರುಚಿಯೊಂದು ಸಣ್ಣ ಮನಸ್ಸಿನ ವ್ಯಕ್ತಿ. ಅವಳಲ್ಲಿ ಮಾತೃತ್ವದ ಔದಾರ್ಯಕ್ಕಿಂತ ಸಂಕುಚಿತ ಮಮತೆ ಹೆಚ್ಚಿದೆ. ಅದರಿಂದ ಅವಳು ಸುನೀತಿಯ ಉದಾತ್ತತೆಗೆ ವಿರುದ್ಧವಾಗಿ ಕ್ಷುದ್ರಳಾಗಿ ತೋರುತ್ತಾಳೆ. ಇದಕ್ಕೆ ಕುರುಡು ಧರ್ಮಕ್ಕೆ ಅಳಾದ ಉತ್ತಾನಪಾದ ಮತ್ತು ಅವನ ಮಂತ್ರಿಗಳು ಪ್ರೇಮಧರ್ಮಕ್ಕಿಂತ ರಾಜಧರ್ಮವೇ ಹೆಚ್ಚೆಂದು ತಿಳಿದು ಧ್ರುವ ಉತ್ತಮರಲ್ಲಿ ಭೇದಭಾವದಿಂದ ನಡೆದುಕೊಂಡುದು ಕಾರಣವೆಂದು ಇಲ್ಲಿ ತೋರಿಸಲಾಗಿದೆ. ಆದರೆ ಆ ಅಧೀರ ಪ್ರಕೃತಿಯ ರಾಜ ಕಡೆತನಕ ತಾನು ಉತ್ತಮವೆಂದು ತಿಳಿದ ರಾಜಧರ್ಮ ಮತ್ತು ನ್ಯಾಯವೆಂದು ತಿಳಿದ ಧ್ರುವಪ್ರೀತಿಗಳನ್ನು ಉಳಿಸಿಕೊಳ್ಳಲಾರದೆ ಹೇಡಿಯಂತೆ ಸುರುಚಿಯ ಬೆದರಿಕೆಗಳಿಗೆ ಅಳಾಗಿ ಧ್ರುವನಿಗೆ ತನ್ನ ಮನಕ್ಕೆ ವಿರುದ್ಧವಾಗಿ ಅಪ್ರಿಯವನ್ನುಂಟು ಮಾಡಿದ್ದನ್ನು ಪಂಥನಂತೆ ಸಹಿಸಿ, ಅವನು ಆ ಚಿಕ್ಕ ವಯಸ್ಸಿನಲ್ಲಿಯೇ ಪ್ರಪಂಚವನ್ನು ಬಿಟ್ಟು, ಅಸಾಧ್ಯವಾದ ದೈವಸಾಕ್ಷಾತ್ಕಾರಕ್ಕಾಗಿ ಅಂಧಶ್ರದ್ಧೆಗೆ ಶರಣಾಗುವಂತೆ ಮಾಡುತ್ತಾನೆ. ಈ ಅಂಧಶ್ರದ್ಧೆಯ (ಯಾವ ಉದಾತ್ತ ಉದ್ದೇಶವನ್ನೂ ಇಟ್ಟುಕೊಳ್ಳದೆ, ತಂದೆಯ ತೊಡೆಯನ್ನೇರುವ ಸುಖದಿಂದ ವಂಚಿತನಾಗಿ ಆ ನಷ್ಟವನ್ನು ತುಂಬಿಕೊಳ್ಳಲು ದೇವರ ಹತ್ತಿರ ಹೋಗುವ ಆಸೆಯಿಟ್ಟುಕೊಂಡು) ಸ್ಥಿರಭಕ್ತಿಗೆ ನಾರದನೂ ಸುನೀತಿಯೂ ಕಾರಣರು. ಇದೊಂದು ಮಾನಸರೋಗ ಬೀಜ (Inhibition). ಅನೈಸರ್ಗಿಕ ಪ್ರವೃತ್ತಿಯನ್ನು ಬಲಾತ್ಕಾರ ಸಂಸ್ಕಾರಕೊಟ್ಟ ಅಂಧವಾತ್ಸಲ್ಯ ಖಂಡನೀಯ. ಇದೊಂದೇ ಸಾಕು ಪ್ರೇಮಕ್ಕೆ ಜ್ಞಾನ ಅನಿವಾರ್ಯವೆನ್ನಲು! ಆದರೂ ಧ್ರುವಲೋಕದಲ್ಲಿ ಅನಂತ ಸುಖವಿದೆ ಎಂದು ನಂಬುವವರಿಗೆ ಆ ತಾಯ ಕೃತಿ ನ್ಯಾಯ್ಯವೆನಿಸಿತು.

ದೇವರ್ಷಿ ನಾರದನ ವೇಷ ಅಸಹ್ಯವಾಗಿದೆ. ಅವನದೊಂದೇ ಸಾಕು— ಕಲಾ ದಿಗ್ದರ್ಶಕರ ಮನದ ಸೌಂದರ್ಯವನ್ನು ಸೂಚಿಸಲು! ಅವನ ಪಾತ್ರವು ದೇವಲೋಕ ಮನುಷ್ಯ ಲೋಕಗಳಿಗೆ ಒಂದು ಸಂಬಂಧ ಹಚ್ಚಲು ಯತ್ನಿಸಿದ ಮಾನವ ಪ್ರತಿಭೆಯ ಸುಂದರ ನಿರ್ಮಿತಿ. ಅಂಥ ಪಾತ್ರವನ್ನು ಹಿಂದೆಯೇ 'ಕಿಸುರಳಿಪಂ ಪಿಸುಣಪಸರಿಗಂ' ಎಂದು ಹೀಗಳೆದ ಮಾದರಿಯಲ್ಲೇ ಸಿಂಗರಿಸಿದ್ದರೂ ಅವನ ಉದ್ದೇಶದನ್ನು ನಿಃಸ್ವಾರ್ಥಪೂಪ್ರೇಮಮಯವೂ ಎನಿಸುವಂತೆ ಮಾಡಿದ್ದೊಂದು ಯೋಗ್ಯಾಂಶ. ಮಾನವ ಕಾರ್ಯಗಳಲ್ಲಿ ಕ್ಷಣಕ್ಷಣಕ್ಕೆ ದೇವತಾಜೀವಿಗಳು ಸಶರೀರ ಪ್ರತ್ಯಕ್ಷವಾಗಿ ಕೈಹಾಕುವುದನ್ನು ನಂಬುವ ಮುಗ್ಧಶ್ರದ್ಧೆಯನ್ನು ಚೆನ್ನಾಗಿ ತೋರುವಂತೆ ಮಾಡಿದ್ದು ಸಾಮಾಜಿಕ ಜ್ಞಾನಪ್ರಸಾರದ ದೃಷ್ಟಿಯಿಂದ ಘಾತಕವೆಂದು ಹೇಳಲು ವಿಷಾದವಾಗುತ್ತದೆ. ಇಂಥ ಪೌರಾಣಿಕ ಚಿತ್ರಗಳಿಗೆ Rational Explanation— ಬೌದ್ಧಿಕ ಅಂತರಾರ್ಥ ಹುಟ್ಟುವಂತೆ ಕಥಾರಚನೆ ಮಾಡಿದಲ್ಲದೆ ಇಂದಿನ ವಿದ್ವತ್ಸಮಾಜ ಮೆಚ್ಚಲಾರರು; ಮೂಢರೆಂದೂ ಇಂಥದ್ದನ್ನು ಕಂಡು ಜ್ಞಾನಮಾರ್ಗ ಹಿಡಿಯಲಾರರು;

ಹುಬ್ಬಳ್ಳಿಯ 'ರೂಪಂ' ರಂಗದಲ್ಲಿ 'ಪ್ರಕಾಶ್ ಪಿಕ್ಚರ್ಸ್' ನ ಈ ಚಿತ್ರವನ್ನು ಪ್ರದರ್ಶಿಸಲಾಗುತ್ತಿದೆ ಇದು ಎರಡನೆಯವಾರ. ಧ್ರುವನ ಪಾತ್ರ ಬಹಳ ಚೆನ್ನಾಗಿದೆಯಾದುದರಿಂದ ಪ್ರೇಕ್ಷಕರ ಸಂಖ್ಯೆ ಏರಹತ್ತಿದೆ.

## ಪ್ರೇಕ್ಷಕರು

ಪಾಶ್ಚಾತ್ಯರಲ್ಲಿ ಹೆಂಗಸರು ಮತ್ತು ಮಕ್ಕಳೇ ಸಿನೆಮ ಪ್ರೇಕ್ಷಕರಲ್ಲಿ ಬಹುಸಂಖ್ಯರು. ಸಿನೆಮ ದೃಶ್ಯದ ಸಲಕರಣೆಗಳು ಬಹಳವಾಗಿ ಜನರಿಂದ ತಮ್ಮ ಕಲ್ಪನಾಶಕ್ತಿಗೆ ಯಾವ ಕೆಲಸವನ್ನೂ ಕೊಡಬೇಕಾಗಿಲ್ಲ. ಅದರಿಂದ ಕಾಲ ಕಳೆದಂತೆ ತಾವು ಹೋಗಿ ಆನಂದಪಡಲಿಚ್ಛಿಸಿದ್ದರಿಂದಲ್ಲದೆ ಸ್ವತಃ ಸಿನೆಮದಲ್ಲಿ ಯಾವ ರಸಾವಹತೆಯೂ ಇಲ್ಲವೆಂಬುದನ್ನು ಮನಗಾಣುವರು. ಒಟ್ಟಿನ ಮೇಲೆ ಅನೇಕರು ತಪ್ಪದೆ ಸಿನೆಮಕ್ಕೆ ಹೋಗುವುದು ನಿತ್ಯದ ವ್ಯವಹಾರದಿಂದ ಮುಕ್ತರಾಗಿ ಕೆಲಕಾಲವನ್ನು ದರ್ಶನ ವಿಲಾಸದಲ್ಲಿ ಕಾಲ ಕಳೆಯಲೆಂದೇ ಆಗಿದೆ.

ಪ್ರತಿವಾರ ಅಮೇರಿಕದಲ್ಲಿ ೮ ಕೋಟಿ ಪ್ರೇಕ್ಷಕರು ಸಿನೆಮ ನೋಡಲು ಹೋಗುತ್ತಾರೆ ಅಮೇರಿಕದ ಒಟ್ಟು ಜನಸಂಖ್ಯೆ ೧೩ ಕೋಟಿ. ಇಂಗ್ಲೆಂಡಿನಲ್ಲಿ ೨॥ ಯಿಂದ ೩ ಕೋಟಿ ಜನರು ಪ್ರತಿವಾರ ಸಿನೆಮ ನೋಡುತ್ತಾರೆ. ಅಲ್ಲಿಯ ಜನಸಂಖ್ಯೆ ೪॥ ಕೋಟಿ. ಈ ಎರಡೂ ದೇಶಗಳಲ್ಲಿ ನೂರಕ್ಕೆ ೫೦ ರಷ್ಟು ಜನರು ಕಾಯಂ ಪ್ರೇಕ್ಷಕರು. ನೋಟಕರಲ್ಲಿ ಇಂಗ್ಲೆಂಡಿನಲ್ಲಿ ೪೫ ಲಕ್ಷ ಮತ್ತು ಅಮೇರಿಕದಲ್ಲಿ ೧ ಕೋಟಿ ೧೦ ಲಕ್ಷ ಮಕ್ಕಳು. ಸಾಮಾನ್ಯವಾಗಿ ವಿದ್ಯಾರ್ಥಿಗಳಲ್ಲಿ ಬಹಳ ಜನ ಬಹಳ ಸಲ ಸಿನೆಮಕ್ಕೆ ಹೋಗುವುದಿಲ್ಲ.

೧ ಸೂಟಿ ಇದೆ, ಆದುದರಿಂದ ಸಿನೆಮಕ್ಕೆ ಹೋಗಬೇಕು—ಎಂದು ಉದ್ದೇಶ ರಹಿತರಾಗಿ ಸಿನೆಮಕ್ಕೆ ಹೋಗಿ ಹೊತ್ತು ಕಳೆದು ಆನಂದಿಸುವವರಲ್ಲಿ ಕಾರಖಾನೆ ಮುಂತಾದಲ್ಲಿ ಇಡೀ ದಿನ ಕೆಲಸ ಮಾಡಿ ದಣಿದ ನೌಕರರೇ ಹೆಚ್ಚು.

೨ ತಂತಮ್ಮ ಅತೃಪ್ತ ಆಶೆಗಳು ಪೂರ್ತಿಯಾದುದನ್ನು ಸಿನೆಮದಲ್ಲಾದರೂ ನೋಡೋಣ ಎಂದು ಹೋಗುತ್ತಾರೆ ಭಾವನಾ ಪ್ರಧಾನರಾದ ಬೌದ್ಧಿಕವ್ಯವಸಾಯಿಗಳು.

೩ ಸಿನೆಮ ಕಲೆಯಲ್ಲಿ ಆಸಕ್ತಿಯುಳ್ಳವರೆಂದು ಅಲ್ಲಿಯ ಭಾವಚಿತ್ರ ಗ್ರಹಣಕ್ರಮ ಮುಂತಾದ ತಾಂತ್ರಿಕ ಪರಿಪೂರ್ಣತೆಯನ್ನು ನೋಡುವವರದೊಂದು ವರ್ಗ.

೪ ಕೆಲವು ಸಾಮಾಜಿಕರು ಚಿನ್ನ ಬೆಳ್ಳಿ ಒಡವೆ ವಸ್ತು ಮುಂತಾದ ಶ್ರೀಮಂತಿಕೆಯ ಸೊಗಸನ್ನು ಕಂಡು ಆನಂದಿಸಲೆಂದೇ ಸಿನೆಮಕ್ಕೆ ಹೋಗುತ್ತಾರೆ.

೫ ಕೆಲವರಿಗೆ ಹಾಸ್ಯವೇ ಮುಖ್ಯ; ಅದ್ಭುತ ದೃಶ್ಯಗಳೇ ಇಷ್ಟ-ಅವನ್ನು ನೋಡಲು ಅವರು ರೂಪರಂಗಗಳಿಗೆ ಹೋಗುತ್ತಾರೆ. ಈ ಇಂದ್ರಜಾಲದಿಂದ ಮುಗ್ಧರಾಗುವವರೇ ಬಹಳ.

೬ ಮತ್ತಿತರರು ಕೇವಲ ಆಟ, ಪಾಠ ವಿನೋದ ನೃತ್ಯಾದಿಗಳನ್ನು ನೋಡಲು ಹೋಗುವರು.

---

"ಅನೋಖಿ ಅದಾ" ಎಂಬ ಮೆಹಬೂಬ್ ನಿರ್ಮಿತಿ ಈಗ ಹೊರಬಿದ್ದಿದೆ. ಅದೊಂದು ಶೃಂಗಾರಕಥೆ. ಅದರಲ್ಲಿ ಒಬ್ಬ ತರುಣನು ಕರ್ತವ್ಯನಿಷ್ಠೆ, ಸ್ವಸುಖ ಮತ್ತು ಸ್ತ್ರೀ ಪ್ರೇಮ ಈ ಮೂರರ ನಡುವೆ ಸಿಕ್ಕಿ ಒದ್ದಾಡುವನ್ನು ಚಿತ್ರಿಸಲಾಗಿದೆ.

---

## [illegible] ಬ್ರುಸ್ಸೆಲ್ಸ್

(ಬ್ರುಸೆಲ್ಸಿನಿಂದ ಶ್ರೀ [illegible])

ಬೆಲ್ಜಿಯಂ ದೇಶದ ರಾಜಧಾನಿ ಬ್ರುಸೆಲ್ಸ್ ಪ್ರಮುಖವಾದ ನಗರವೆಂಬುದು ನಿಜ. ೧೦ ಲಕ್ಷ ಜನರು ಇಲ್ಲಿ ವಾಸಿಸುತ್ತಾರೆ. ನಗರದ ಜನಸಂಖ್ಯೆಗೆ, ಅದರ ವಿಸ್ತೀರ್ಣ ದೊಡ್ಡದು. ಅಗಲವಾದ ಸುತ್ತುಸೀಸಾದ ಬೀದಿಗಳಿವೆ. ಚಿಕ್ಕದಾದ ಅಂದವಾದ ಕಟ್ಟಡಗಳಿವೆ. ನಗರದಲ್ಲಿ ಪ್ರಯಾಣ ಸೌಕರ್ಯಕ್ಕೆ ಬಸ್ಸುಗಳಿವೆ. ಟ್ರಾಂ ಕಾರುಗಳನ್ನೂ ಹಾಕಿದ್ದಾರೆ.

ಪ್ಯಾರಿಸ್ಸಿನಿಂದ ಬ್ರುಸ್ಸೆಲ್ಸ್‌ಗೆ ನಾಲ್ಕು ಘಂಟೆಗಳ ಪ್ರವಾಸ. "ಕ್ವೇ" ಎಂಬ ನಗರವೇ ಫ್ರಾನ್ಸ್, ಬೆಲ್ಜಿಯಂಗಳಿಗೆ ಗಡಿಪ್ರದೇಶ. ಇಲ್ಲಿ ಎರಡೂ ಸರಕಾರಗಳವರು Passport ಗಳನ್ನು ಪರೀಕ್ಷಿಸುತ್ತಾರೆ. ಇಲ್ಲಿಂದ ಮುಂದೆ ಸಿಕ್ಕುವುದು "ಮಾನ್ಸ್" ಎಂಬ ನಗರ.

ನಮ್ಮ ರೈಲು ಬ್ರುಸ್ಸಲ್ಸ್‌ಗೆ ಬಂದಾಗ ರಾತ್ರಿ ಎಂಟು ಗಂಟೆ. ನಗರವೆಲ್ಲಾ, ಅಮೇರಿಕದ ನಗರಗಳಂತೆ ನಿಯಾನ್ ದೀಪಗಳಿಂದ ಪ್ರಕಾಶಿಸುತ್ತಿತ್ತು. ಆ ಮೇಲೆ ತಿಳಿಯಿತು, ಬೆಲ್ಜಿಯಂ ದೇಶದಲ್ಲಿ ಅಮೇರಿಕೆಯ ಪ್ರಭಾವ ಜಾಸ್ತಿ—ಎಂದು ಸಹಾಯ ಎಲ್ಲ ರೀತಿಯಲ್ಲೂ ಆಗುತ್ತಿದೆಯಂತೆ.

ಬೆಲ್ಜಿಯಂಗೆ ಆ ದೇಶದ ಸ್ವಂತಭಾಷೆಯಿಲ್ಲ. ಅರ್ಧ ಜನರು ಫ್ರೆಂಚ ಮಾತನಾಡುತ್ತಾರೆ. ಇನ್ನರ್ಧ ಜನರು ಡಚ್ ಭಾಷೆ (ಫ್ಲೆಮಿಷ್) ಯನ್ನು ಆಡುತ್ತಾರೆ. ಭಾರತದಲ್ಲಿನಂತೆ ಬಹುಜನ ವಿದ್ಯಾವಂತರು, ಇಂಗ್ಲೀಷು ಮಾತನಾಡುತ್ತಾರೆ. ಟ್ಯಾಕ್ಸಿ ಡ್ರೈವರುಗಳು ಪೋಲೀಸಿನವರು ಹೋಟೆಲ್ಲಿನ ಮಾಣಿಗಳು, ಇವರಿಗೆಲ್ಲ ಇಂಗ್ಲೀಷು ಬರುತ್ತದೆ. ಕಾರಣ ಬ್ರುಸ್ಸಲ್ಸ್‌ನಲ್ಲಿ ಇಂಗ್ಲೀಷ ಬಲ್ಲವರಿಗೆ ಅಷ್ಟು ತೊಂದರೆಯಾಗುವದಿಲ್ಲ.

ಬೆಲ್ಜಿಯಂದಲ್ಲಿ ನಾಣ್ಯ ಲೋಹದ್ದು ಎಂದು ಹಿಂದೆಯೇ ಬರೆದನಷ್ಟೆ. ೧ ಪೌಂಡಿಗೆ ೧೬೩ ಬೆಲ್ಜಿಯಂ ಫ್ರಾಂಕುಗಳು ಸಿಕ್ಕುತ್ತವೆ. ಇಲ್ಲಿಯೂ ನಾಣ್ಯಗಳಿಗೆ ಫ್ರಾಂಕುಗಳೆನ್ನುತ್ತಾರೆ. ಆದರೆ ಫ್ರಾಂಕಿಗೆ ೧೦೦ ಸೆಂಟ್ಸ ಗಳಿವೆ. ಅದು ಸಣ್ಣ ನಾಣ್ಯ.

ಪ್ಯಾರಿಸ್ಸಿನಲ್ಲಿ ನಾಲ್ಕು ದಿನ "ಉಪವಾಸ" ವಿದ್ದನಂತರ ನನ್ನ ಹೊಟ್ಟೆ ತುಂಬಿದ್ದು ಈ ಬ್ರುಸ್ಸೆಲ್ಸ್‌ನಲ್ಲಿಯೇ. ಇಲ್ಲಿ ಹಾಲಿಗೆ, ಸಕ್ಕರೆಗೆ ರೇಷನ್ ಇಲ್ಲ. ಎಷ್ಟು ಬೇಕಾದರೂ ಆಹಾರ ಸಿಕ್ಕುತ್ತದೆ. ಆದರೆ ಸ್ವಲ್ಪ ದುಬಾರಿ. ಶಾಕಾಹಾರಿಯಾದವರಿಗೆ ಬ್ರುಸ್ಸೆಲ್ಸ್‌ನಲ್ಲಿ ಏನೂ ಕಷ್ಟವಾಗುವುದಿಲ್ಲ. ಇಲ್ಲಿಯ ರಾಷ್ಟ್ರೀಯ ಆಹಾರ ದ್ರಾಕ್ಷೆ. ಬೆಳೆದ ಅರ್ಧ ದ್ರಾಕ್ಷೆಯನ್ನು ಹೊರದೇಶಗಳಿಗೆ ನಿರ್ಯಾತ ಮಾಡುತ್ತಾರೆ. ದ್ರಾಕ್ಷೆಯು ಬೆಲೆಯೂ ಸುಲಭ.

ಬ್ರುಸ್ಸೆಲ್ಸ್, ರಣಭೂಮಿ ಎಂದು ಕರೆದಿದ್ದೇನೆ. ಆದರೆ ಬೆಲ್ಜಿಯನ್ ಜನರು ಯುದ್ಧಾಸಕ್ತರು ಎಂದು ತಿಳಿಯಬಾರದು. ಬೆಲ್ಜಿಯನ್ ಜನರು ತುಂಬಾ ಒಳ್ಳೆಯವರು. ಅವರಿಗೆ ಯುದ್ಧವೆಂದರೆ ಆಗದು. ಕಾರಣಾಂತರಗಳಿಂದ ಬೆಲ್ಜಿಯಂ ಯುದ್ಧದ ಪೆಟ್ಟುಗಳನ್ನು ತಿನ್ನದೇ ಇಲ್ಲ ಒಂದು ಕಾಲಕ್ಕೆ ಫ್ರೆಂಚರೇ ಇವರ ಶತ್ರುಗಳಾಗಿದ್ದರು. ೧೯೧೪ ರಲ್ಲಿ ಜರ್ಮನರು ಬೆಲ್ಜಿಯಮ್ಮನ್ನು ಆಕ್ರಮಿಸಿಕೊಂಡು ೪೧/೨ ವರ್ಷಗಳ ಕಾಲ ಆಳಿದರು. ಮೊನ್ನಿನ ಮಹಾಯುದ್ಧದಲ್ಲಿ ನಾಲ್ಕು ವರ್ಷಗಳ ಕಾಲ ಬೆಲ್ಜಿಯಂ ಹಿಟ್ಲರನ ವಶದಲ್ಲಿತ್ತು. ಬ್ರುಸ್ಸೆಲ್ಸ್‌ನಿಂದ ಜರ್ಮನಿಗೆ ನೇರವಾದ ಒಳ್ಳೆಯ ದಾರಿಯಿದೆ. ಇಲ್ಲಿಯ ರಸ್ತೆಗಳು ತುಂಬಾ ಚೊಕ್ಕಟವಾಗಿಯೂ ಸುಂದರವಾಗಿಯೂ ಇವೆ. ಏರುತಗ್ಗುಗಳಿಲ್ಲ ಆ ಕಾರಣವೇ ಜರ್ಮನರಿಗೆ ಬೆಲ್ಜಿಯಂಗೆ ನುಗ್ಗಲು ತುಂಬಾ ಸುಲಭವಾಯಿತು.

[illegible] ನಗರವನ್ನು [illegible] ಸುತ್ತು [illegible] ಬೆಲ್ಜಿಯಮ್ಮನ್ನು [illegible] ಹೇಳುತ್ತ ಹೊರಟುಹೋಗಿದರಂತೆ.

ಬ್ರುಸೆಲ್ಸ್, ರಣಭೂಮಿ ಎಂದೆನೆ! [illegible] ವಿವರ ಈ ಸುಂದರ್ಭದಲ್ಲಿ [illegible] ಬೇಕು. [illegible] ಕದನವನ್ನು [illegible] ವಾಟರ್‌ಲೂ [illegible] ಬ್ರುಸೆಲ್ಸ್ [illegible] ೧೦ ಮೈಲು ದೂರದಲ್ಲಿ. ಈ [illegible] ಲ್ಲಿಗೆ ಹೋಗಿದ್ದೆವು. ಯುದ್ಧ [illegible] ಕದನ" ಎಂದು ಹೆಸರಾಗಿದ್ದರೂ [illegible] ದಿದ್ದುದು ವಾಟರ್‌ಲೂ ಹಳ್ಳಿಯಿಂದ [illegible] ಮೈಲು ದೂರದಲ್ಲಿ. ಮಿತ್ರ ಸೈನ್ಯಕ್ಕೆ Duke of Wellington ಸೈನ್ಯಾಧಿಪತಿಯಾಗಿ [illegible] ಆತ ವಾಟರ್‌ಲೂನಲ್ಲಿ ತನ್ನ ಮುಖ್ಯ [illegible] ಯನ್ನು ಸ್ಥಾಪಿಸಿಕೊಂಡಿದ್ದಕಾರಣ [illegible], ಮತ್ತು ಕೊನೆಗೆ ಆತನ ನೇತೃತ್ವದಲ್ಲಿಯೇ ಜಯ ಸಿಕ್ಕಿದ್ದರಿಂದ ಆ ಕದನಕ್ಕೆ ವಾಟರ್‌ಲೂ ಕದನವೆಂದು ಹೆಸರಾಗಿದೆ.

ಸರ್ವಾಧಿಕಾರಿ ಫ್ರೆಂಚ್ ಸಾಮ್ರಾಟ ನೆಪೋಲಿಯನ್ ಇದೀಯುರೋಪನ್ನು ಗೆಲ್ಲುವ [illegible] ದಲ್ಲಿ, ೭೦,೦೦೦ ಫ್ರೆಂಚ್ ಸೈನಿಕರನ್ನು ವಾಟರ್‌ಲೂ ಬಳಿಸೇರಿಸಿ ಯುದ್ಧ [illegible]. ಈ ಸೈನ್ಯದಲ್ಲಿ ಫ್ರೆಂಚ್ [illegible] ಇದ್ದರು. ಅಂದಿನ ಭಾನುವಾರ [illegible] ರಿಂದ ಸಂಜೆ ೮ ರ ವರೆಗೆ ಅತ್ಯಾಹತವಾದ ಯುದ್ಧ ನಡೆಯಿತು. ನೆಪೋಲಿಯನ್ [illegible] ಕೊನೆಯ ಸಲ ಖುದ್ದಾಗಿ ಸೈನ್ಯ [illegible]. ಅಂದು ವಿಪರೀತ ಮಳೆ. ಫ್ರೆಂಚ್ [illegible] ಸವಾರರು ಈ ಕೆಸರಿನಲ್ಲಿ ಯುದ್ಧ [illegible] ದಾದರು. ಫ್ರೆಂಚ್ ಸೈನ್ಯ ಕುಗ್ಗಿತು [illegible]. ನೆಪೋಲಿಯನ್ ಪಲಾಯನ [illegible] ಒಂದೆ ತನ್ನ ಕುದುರೆ ಗಾಡಿಯನ್ನು [illegible] ದಿದ. ಅದರಲ್ಲಿ ತನ್ನ [illegible] ಆಗ [illegible] ಫ್ರೆಂಚರ ವಿರುದ್ಧ [illegible] ಬೆಲ್ಜಿಯನರು, [illegible] (Meroenerius [illegible]) [illegible]

[illegible]

—[illegible]

# ತೆಂಗಿನ ರೋಗಗಳೂ ಅವುಗಳ ನಿವಾರಣೆಯೂ

ಲೇ:—ಶ್ರೀ. ವಿ. ಜಿ. ಭಟ್ಟ, ಎಂ. ಎ.

( Indian Central Coconut Committee Bulletin ದಿಂದ )

ಇಂದ್ರನ ಟೊಪ್ಪಿತುಂಬ ತೂತು ಬಿದ್ದಿರುವಾಗ ಕಲ್ಪವೃಕ್ಷಕ್ಕೆ ರೋಗಬರುವದು ಆಶ್ಚರ್ಯವೇ ? ಭೂಲೋಕದ ಕಲ್ಪವೃಕ್ಷವೆಂದಮೇಲೆ ಅದಕ್ಕೆ ಹಲವು ಬಗೆಯ ರೋಗಗಳು ಬರುವದು ಸಹಜ. ಭೂಸುರರು ಭಸ್ಮವನ್ನು ಮಂತ್ರಿಸಿ ಕಟ್ಟಿದರೂ ಅವು ನಿಲ್ಲದುದು ಕಾಲವು ಹಿಮೆ ಯಿದ್ದಿರಲೂ ಬಹುದು. ಅಂತೂ ತೆಂಗಿನ ಮರಗಳ ಚೆಂಡೆಯೇ ಕೊಳೆ ಹಿಡಿದು ಹಾರುವದನ್ನು, ಎಲೆಗಳುಹುಳಬಿದ್ದು ಕೊಳೆತು ಉದುರಿ ಹೋಗುವದನ್ನು, ಬೊಡ್ಡೆಯು ತನ್ನ ಮೈ ಸೀಳಿನಿಂದ ಕಣ್ಣೀರುಸುರಿಸುವದನ್ನು, ಬೇರಿಗೇ ಬೇನೆ ಹಿಡಿದು ಮರ ಬಳಲುವದನ್ನು, ಮಿಡಿಗಳೇ ಉದುರಿ ಹೋಗುವದನ್ನು ನಾವು ಕಾಣುತ್ತೇವೆ.

ಸುಳಿಯು ಹಳದಿಯಾಗಹತ್ತಿ ಬಾಡಿ ಬಾಗಿ ಹೋಗುವದನ್ನು ನೋಡಬಹುದು. ನಡುವಿನ ಎಳೆಯ ಸುಳಿಗೇ ಹೀಗೆ ರೋಗ ಅಂಟಿದ ಮೇಲೆ ಸುತ್ತಲಿನ ಹೆಡೆಗಳಿಗೆ ಅದು ಹಬ್ಬುವದು ಸುಲಭ. ಕ್ರಮೇಣ ಎಲ್ಲ ಹೆಡೆಗಳಿಗೂ ಇದೇ ಗತಿಯಾಗಿ ಚೆಂಡೆಗೆ ಚೆಂಡೆಯೇ ಹಾರಿ ಹೋಗುತ್ತದೆ. ನೆತ್ತಿಯು ಬೋಳಾದರೂ ತಲೆಯ ಸುತ್ತೂ ಅಲ್ಲಲ್ಲಿ ತಪ್ಪಿ ಉಳಿದ ಕೂದಲಿನಂತೆ ಒಂದೆರಡು ಹೆಡೆ, ಕೊನೆಗಳು ನೇತಾಡಿದರೂ ಕ್ರಮೇಣ ಅವೂ ಬಿದ್ದು ಹೋಗಿ ಮರ ಬೋಳಾಗುವದು.

ಬಂದಳಿಕೆ ರೋಗ (ಕಿರಿಜಿಗಿ) (Fungus) ಹಿಡಿದ ಇತರ ಮರಗಳಿಂದ ರೋಗದ ಬೀಜಗಳು ಹಾರಿ ಬಂದು ತೆಂಗಿನ ಸುಳಿಯೊಳಗೆ ಬಿದ್ದು ಇಳಿಯುತ್ತವೆ; ಸಾವಕಾಶ ಚೆಂಡೆಯ ಬುಡಕ್ಕೆ ಸೇರಿ ಕೊಳೆಯಹತ್ತುತ್ತವೆ. ಹವೆಯ ಆರ್ದ್ರತೆಯಿಂದ ಇದಕ್ಕೆ ಹಬ್ಬಲು ಸಹಾಯ ಸಿಗುತ್ತದೆ. ಒಣ ಹವೆಯಲ್ಲಿ ಇದು ಅಷ್ಟು ಪಸರಿಸಲಾರದು. ಇದು ಗಾಳಿಯ ದಿಕ್ಕನ್ನವಲಂಬಿಸಿದೆ.

## ಪರಿಹಾರ

ಚೆಂಡೆಯೆಲ್ಲ ಕೊಳೆತಿದ್ದರೆ ಅದನ್ನು ಬದುಕಿಸುವದು ಬಿಗಿ. ಆಗ ಅದನ್ನು ಕಡಿದು ಸುಟ್ಟು ಹಾಕಿ, ಇತರ ಗಿಡಗಳಿಗಾದರೂ ಈ ರೋಗ ಸೋಂಕದಂತೆ ಎಚ್ಚರಿಕೆ ವಹಿಸುವದೇ ಒಳಿತು. ಅಲ್ಪಸ್ವಲ್ಪ ಕೊಳೆತಿದ್ದರೆ ಆ ಹೆಡೆಗಳನ್ನು ಬುಡಹತ್ತ ಕಡಿದು ಹಾಕಿ ಆ ಜಾಗಕ್ಕೆ ಚೆನ್ನಾಗಿ ಕೊಳೆಮದ್ದು ಹಾಕಬೇಕು. ಕೊಳೆಯಹತ್ತಿದವುಗಳ ಬಗ್ಗೆ ತೆಗೆದುಕೊಳ್ಳುವ ಜಾಗ್ರತೆಗಿಂತ ಇನ್ನೂ ಹತ್ತಿರದ ಸುತ್ತಲಿನ ಮರಗಳ ಬಗ್ಗೇ ಹೆಚ್ಚು ಲಕ್ಷ್ಯ ಪೂರೈಸುವದು ಲೇಸು. ಗುಣಪಡಿಸುವುದಕ್ಕಿಂತ ಮುಂಜಾಗ್ರತೆ ತೆಗೆದುಕೊಳ್ಳುವದೇ ಒಳಿತಾದ ಉಪಾಯ.

ಎಲೆಗಳ ಒಳಮಗ್ಗಲಿನಿಂದ ತೂತು ಬೀಳಹತ್ತಿ ಅವು ಕೊಳೆಯಹತ್ತುತ್ತವೆ. ಕೊಳೆಯುವದರಲ್ಲೂ ಒಂದು ಶಿಸ್ತಿದೆ. ಹೆಡೆಗಳಿಗೆ ಬೀಸಣಿಕೆಯ ಆಕಾರ ಬರುವಂತೆ ಎಲೆಗಳಿಗೆ ತೂತು ಬಿದ್ದು ಎಲೆಗಳ ಅರ್ಧಭಾಗ ಗಾಳಿಗೆ ಮುರಿದು ಬೀಳುತ್ತವೆ. ಎಲ್ಲ ಹೆಡೆಗಳೂ ಹೀಗಾದವೆಂದರೆ ಮರವು ಅರ್ಧ ಜುಟ್ಟುಕೊಯ್ದ ಮನುಷ್ಯನಂತೆ ಕಾಣಿಸುತ್ತದೆ! ಈ ರೋಗದಿಂದ ಗಿಡಗಳಿಗೆ ಕೂಡಲೇ ಅಪಾಯವಿಲ್ಲವಾದರೂ ಅವು ಕ್ರಮೇಣ ನೆಲ ಹಿಡಿಯುತ್ತವೆ.

ಎಲೆಗಳಿಗೆ ತೂತುಬಿದ್ದು ಹೆಡೆಗಳು ಬೀಸಣಿಕೆಯಂತಾಗುವದರೊಳಗೇ ಕೆಟ್ಟಷ್ಟು ಭಾಗವನ್ನು ಕಡಿದುಹಾಕಿ ಬಿದ್ದ ಎಲೆ ಹೆಡೆಗಳನ್ನು ಸುಟ್ಟುಬಿಡಬೇಕು. ಇಂಥ ಮರಗಳಿಗೆ ವರ್ಷದಲ್ಲಿ ಮೂರು ಸಲ ಕೊಳೆಮದ್ದು ಹೊಡೆಯಬೇಕು. ಗೊಬ್ಬರದಲ್ಲಿ ಸಸ್ಯಕ್ಷಾರ ಹೆಚ್ಚು ಹಾಕಿದ್ದರೆ ಈ ರೋಗ ಕಡಿಮೆಯಾಗುತ್ತದೆ. ಈ ರೋಗ ಇರುವ ತೋಟದ ಎಲ್ಲ ಮರಗಳಿಗೂ ವರ್ಷದಲ್ಲೊಮ್ಮೆ ಕೊಳೆಮದ್ದುಹೊಡೆಯುವದೊಳಿತು.

ಕೆಲವು ಸಲ ಎಲೆಗಳಿಗೆ ತೂತು ಬೀಳದೆ, ಅವುಗಳ ಹೊರಮಗ್ಗಲಿಗೆ ಹಳದಿ ಕಲೆಗಳು ಬಿದ್ದು ಸಾವಕಾಶವಾಗಿ ಎಲೆಯ ತುಂಬ ಪಸರಿಸುತ್ತವೆ: ಇದರಿಂದ ಮರಕ್ಕೆ ಹಾನಿಯೇನೂ ಇರದಿದ್ದರೂ ಮರವು ಅಷ್ಟು ಚೆನ್ನಾಗಿ ಬೆಳೆಯದಿದ್ದ ಸಂದರ್ಭಗಳಲ್ಲಿ ಇವೇ ಸಾಕು ಅವುಗಳ ನಾಶಕ್ಕೆ— ಮನುಷ್ಯರಿಗೆ ಸಣ್ಣ ಕುರಿಯಾದರೆ ಹೇಗೋ ಹಾಗೆ. ಈ ರೋಗದಿಂದ ತೋಟಗರಿಗೆ ಒಂದು ಪ್ರಯೋಜನವೆಂದರೆ— ಈ ಕಲೆಗಳು ಕಂಡುಬಂದೊಡನೆಯೇ 'ಗಿಡಗಳಿಗೆ ಲಕ್ಷ್ಯಪೂರೈಸಬೇಕು' ಎಂಬ ಅಲಾರ್ಮು (Alarm) ಅವರಿಗಾಗುತ್ತದೆ. ಕೂಡಲೇ ಅವರು ಕೊಳೆ ಮದ್ದು ಹೊಡೆದು ಮುಂದಾಗಬಹುದಾದ ನಾಶವನ್ನು ತಡೆಯಬಹುದು.

## ಕಾಂಡದ ರೋಗ

ಬೊಡ್ಡೆ ಕಾಂಡಗಳಿಗೆ ಸಣ್ಣ ಸೀಳುಬಿಟ್ಟು ಅದರಿಂದ ಒಂದು ಬಗೆಯ ಕೆಂಪು ನೀರು ಹರಿಯುವದನ್ನು ಕಾಣುತ್ತೇವೆ. ಒಂದು ಮರಕ್ಕೆ ಇಂಥ ನಾಲ್ಕಾರು ಸೀಳುಗಳಾಗಿ ಅವು ಒಂದಕ್ಕೊಂದು ಕೂಡಿಕೊಂಡು ಎಳೆಯ ಗಿಡಗಳಿದ್ದರೆ ಅವನ್ನು ನಾಶ ಮಾಡುತ್ತವೆ ಬೆಳೆದ ಮರಗಳು ಇದರಿಂದ ಅಷ್ಟು ಕೆಡುವದಿಲ್ಲವಾದರೂ ಕಾಯಿ ಅಷ್ಟು ಸರಿಯಾಗಿ ಬಿಡುವದಿಲ್ಲ. ಈ ರೋಗವು ಒತ್ತೊತ್ತಾಗಿ ಹಚ್ಚಿದ ತೋಟಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಸೀಳನ್ನು ಕೊರೆದು ನೋಡಿದರೆ ಒಳಗೆ ಕೊಳೆಯುತ್ತಿರುವದು ಕಂಡುಬರುತ್ತದೆ.

ಇದಕ್ಕೆ ಮರಗಳಿಗಾಗುವ ಗಾಯಗಳೇ ಕಾರಣ. ತೋಟದಲ್ಲಿ ಕೆಲಸ ಮಾಡುವವರು ತಿಳಿದೋ ತಿಳಿಯದೋ ಕತ್ತಿ ಕೊಡಲಿಗಳಿಂದ ಮರಕ್ಕೆ ಪೆಟ್ಟು ಮಾಡುತ್ತಾರೆ. ಮರ ಏರುವಾಗ ಕತ್ತಿಯ ಮೊನೆಯಿಂದ ಮರವನ್ನು ಚುಚ್ಚುಹವರಿದ್ದಾರೆ. ಇನ್ನು ಹವಾಮಾನಗಳಲ್ಲಿ ಆಗುವಬದಲಾವಣೆಗಳಿಂದಲೂ ಬೊಡ್ಡೆ ಸೀಳುವದು. ಹೀಗೆ ಸೀಳಿದರೆ ಕೀರಿಕು ರೋಗ ಅಲ್ಲಿ ಮನೆಮಾಡುತ್ತದೆ.

ನಿಸರ್ಗದ ಕೃತ್ಯಗಳನ್ನು ತಡೆಯುವದು ಸಾಧ್ಯವಿಲ್ಲವಾದರೂ ನಮ್ಮ ಕೈಯಿಂದಾಗುವ ಪೆಟ್ಟುಗಳನ್ನು ಆಗಗೊಡಬಾರದು. ಬೇಸಿಗೆಯ ಉರಿಯನ್ನು; ತೋಟದ ಹರಿಗಳಲ್ಲಿ ನೀರು ನಿಲ್ಲಿಸಿ ತುಸು ತಡೆದರೆ, ಮಳೆಗಾಲದ ಜವುಳನ್ನು ಕಾರಿಗೆಗಳಿಂದ ಹರಿಯಿಸಿದರೆ ಈ ರೋಗ ಎಷ್ಟೋ ಕಡಿಮೆಯಾಗುತ್ತದೆ. ಪ್ರಾಣಿಗಳಿಗೆ ಶಸ್ತ್ರಕ್ರಿಯೆ ಮಾಡುವಂತೆ, ಸೀಳಿದ ಭಾಗವನ್ನು ಕೆತ್ತಿಹಾಕಿ, ಅಲ್ಲಿ ಮಳೆಯ ನೀರು ನಿಲ್ಲದಂತೆಮಾಡಿ, ಆ ಜಾಗಕ್ಕೆ ಬಿಸಿಡಾಂಬರವನ್ನಾಗಲಿ ಕ್ರೂಡ್ ಆಯಿಲ್ ಅನ್ನಾಗಲೀ ಹಚ್ಚಬೇಕೆಂದು ಕೆಲವು ತಜ್ಞರ ಅಭಿಪ್ರಾಯ. ಈ ಶಸ್ತ್ರಕ್ರಿಯೆ ಬಡ ತೋಟಗರಿಗೆಲ್ಲಿ ಸಾಧ್ಯ? ಸರಕಾರೀ ತೋಟಗಳ ಪ್ರಯೋಗಕ್ಕೇ ಅವು! ಆದರೆ ಬಿಸಿ ಡಾಂಬರ ಹಾಕಬಾರದೆಂಬ ತಜ್ಞರೂ ಕೆಲವರಿರುವರು.

ಸಸಿಗಾಗಿ ತೆಗೆದಿಟ್ಟ ಬೀಜವು ೨೫—೩೦ ವರ್ಷಗಳ ಮರದ್ದಲ್ಲವಾದರೆ, ನೆಲದಲ್ಲಿ ಸಸ್ಯಕ್ಷಾರವಿಲ್ಲದಿದ್ದರೆ ತೆಂಗಿನಮಿಡಿಯೇ ಉದುರುತ್ತದೆ. ೨೫ ರ ಮೇಲಿನ ೩೦ ರ ಒಳಗಿನ ಪ್ರಾಯದ ಮರದ ಕಾಯಿಯನ್ನು ಬೀಜಕ್ಕೆ ಆರಿಸಬೇಕು. ಈ ಬೀಜಗಾಯಿ ಜನೇವರಿ ತಿಂಗಳಲ್ಲಿ ಬಲಿತು, ಕೊಯ್ದುದ್ದಿದ್ದರೆ ಬಹಳ ಒಳಿತು.

---

(೧೧ನೇ ಪುಟದಿಂದ)

ಬಂದುದು. ಈ ಬೆಟ್ಟದ ಮೇಲಕ್ಕೆ ಹೋಗಲು ಅನುಕೂಲವಾಗುವಂತೆ ೨೨೬ ಮೆಟ್ಟಲುಗಳನ್ನು ಮಾಡಿದ್ದಾರೆ. ಬೆಟ್ಟದ ಕೆಳಗಡೆ ಹೋಟಲುಗಳು, ಅಂಗಡಿಗಳು ಇವೆ, ಪ್ರತಿ ಭಾನುವಾರ ಒಂದು ಸಣ್ಣ ಜಾತ್ರೆ ನಡೆದಂತೆ ಕಾಣುತ್ತದೆ.

ಈ ಯುದ್ಧ ನಡೆದ ೫೦ ವರ್ಷಗಳ ನಂತರ ಸುಪ್ರಸಿದ್ಧ ಫ್ರೆಂಚ ಕಾದಂಬರಿಕಾರನಾದ ವಿಕ್ಟರ್ ಹ್ಯೂಗೋ ವಾಟರ್ ಲ್ಯೂಗೆ ಬಂದು ನೆಲಸಿ ಲೇ ಮಿಸರಬಲ್ ಕಾದಂಬರಿಯನ್ನು ಬರೆದ ಈ ಕಾದಂಬರಿಯ ಕೊನೆಯ ಭಾಗದಲ್ಲಿ ವಾಟರ್‌ಲೂ ಕದನವನ್ನು ವಿವರಿಸಿದಾನೆ ಆತ ವಾಸಿಸುತಿದ್ದ ಮನೆಯನ್ನು ಕಾಯ್ದಿಟ್ಟದಾರೆ. ಡ್ಯೂಕ ಆಫ್ ವೆಲಿಂಗ್ಟನ್ ಕದನ ಮುಗಿದ ಮುಗಿದ ನಂತರ ವಾಟರ್‌ಲೂಗೆ ಬಂದು ಆ ರಾತ್ರಿ ವಿಶ್ರಾಂತಿ ತೆಗೆದುಕೊಂಡ ಮನೆ, ಆತ ಉಪಯೋಗಿಸಿದ ಕೊಠಡಿ, ಅಂದು ಮಲಗಿದ ಹಾಸಿಗೆ ಎಲ್ಲವನೂ ವಾಟರ್‌ಲೂನಲ್ಲಿ ಇಂದೂ ಕಾಣಬಹುದು.

ಬೆಲ್ಜಿಯಂನಲ್ಲಿ ಈಗ ಸೋಶಲಿಸ್ಟ್ ಸರಕಾರವಿದೆ. ಈ ದೇಶಕ್ಕೆ ಒಬ್ಬ ರಾಜನಿದ್ದಾನೆ. ಆದರೆಆ ರಾಜ್ಯಸ್ವಿಟ್ಜರ್‌ಲೆಂಡಿನಲ್ಲಿನಿರ್ವಾಸಿತನಾಗಿದಾನೆ. ಆತನ ಮಗನಿಗೆ ಮುಂದಿನ ತಿಂಗಳು ೧೮ ವರ್ಷ ತುಂಬುವದು. ಬೆಲ್ಜಿಯಂ ಪಾರ್ಲ್ಮೆಂಟು ಇನ್ನು ಕೆಲವು ದಿನಗಳಲ್ಲಿ ಬೆಲ್ಜಿಯಂಗೆ ರಾಜ ಬೇಕೆ ಅಥವಾ ಬೇಡವೇ ಎಂದು ನಿರ್ಧರಿಸುವದು.

ಬ್ರಸ್ಸೆಲ್ಸ್‌ನಲ್ಲಿ ನಾ ಇದ್ದುದು ಒಂದೇ ದಿನ. ಅಷ್ಟು ಸಾಕು ಬ್ರಸ್ಸೆಲ್ಸ್ ನೋಡಲು ನಾಳೆ ಸುಂದರ ನಾಡು ಸ್ವಿಟ್ಜರ್‌ಲೆಂಡಿಗೆ ಪ್ರಯಾಣ ಬೆಳೆಸುವೆ.

---

## ಹೈದರಾಬಾದ ಶರಣು ಬಂದಿತು

(೫ನೇ ಪುಟದಿಂದ)

ಗೊಳ್ಳುವದು ಅವಶ್ಯವೆಂಬದು ಎಲ್ಲರಿಗೂ ತಿಳಿಯುವ ಮಾತು. ಅದಕ್ಕಾಗಿ ನಮ್ಮ ಸೈನ್ಯ ಇಡಿ ಹೈದರಾಬಾದನ್ನು ಆಕ್ರಮಿಸಿದೆ. ಆದರೆ ಮೇಲಿಂದ ಮೇಲೆ ಶಾಂತಿ ಸ್ಥಾಪನೆಯಾದಾಕ್ಷಣಕ್ಕೆ ಅದು ಶಾಶ್ವತವಾಗಿ ಉಳಿಯುವದೆಂದು ನಂಬುವದಸದಳ. ರಜಾಕಾರರು ಸಶಸ್ತ್ರ ಸ್ವಯಂಸೇವಕರಾಗಿದ್ದರು. ಅವರಲ್ಲಿ ಲೆಕ್ಕವಿಲ್ಲದಷ್ಟು ಮಂದಿ ಭೂಗತರಾಗಿದ್ದಾರೆಂದು ಹೇಳಲಾಗಿದೆ. ನಿಜಾಮ ಸೈನಿಕರಲ್ಲಿಯೂ ಅನೇಕರು ಅಡಗಿಕೊಂಡಿರಬಹುದು. ಅವರೆಲ್ಲ ಕೆಲ ಕಾಲ ತಲೆ ಮರೆಸಿಕೊಂಡು ಉಳಿದು ನಮ್ಮ ಸೈನ್ಯ ಹೊರಟು ಹೋದ

ಮೇ. ಜನರಲ್ ರುದ್ರ ವಿಜಯವಾಡದಿಂದ ವಿಜಯಯಾತ್ರೆ

ಬಳಿಕ ದೇಶದಲ್ಲಿ ಅರಾಜಕತೆಯನ್ನು ಹಬ್ಬಿಸಲು ಪ್ರಯತ್ನಿಸಬಹುದು. ಬ್ರಹ್ಮದೇಶದಲ್ಲಿ ಸಶಸ್ತ್ರ ವಿರೋಧಿಗಳು ಉಂಟುಮಾಡಿದ ಮತ್ತು ಮಾಡುತ್ತಿರುವ ಅನಾಹುತದಿಂದ ನಾವು ಎಚ್ಚರಗೊಳ್ಳಬೇಕು. ಹಿಂದೀ ಮುಸ್ಲಿಮರ ಮನಸ್ಸು ಇನ್ನೂ ಜಾತೀಯತೆಯಿಂದ ತಿರುಗಿ ರಾಷ್ಟ್ರೀಯತೆಯಲ್ಲಿ ಸರಿಯಾಗಿ ಬೇರೂರಿಲ್ಲ. ಅದರಿಂದ ರಜಾಕಾರರು ಹೆಚ್ಚು ಸೋಡಿ ತೊಂದರೆಗಳನ್ನುಂಟು ಮಾಡಲು ಅವಕಾಶ ನಾವು ರಜಾಕಾರರ ಮತ್ತು ಭೂಗತ ನಿಜಾಮ ಸೈನಿಕರ ಹುಟ್ಟಡಗಿಸದಲ್ಲದೆ ನಮ್ಮ ಸೈನಿಕರು ಹೈದರಾಬಾದಿನಿಂದ ಹಿಂದೆ[illegible]. ಇದಕ್ಕಾಗಿ ಅತ್ಯಂತನಿಷ್ಠುರ ಕ್ರಮಗಳು ಅವಶ್ಯವಾದರೂ. ಪ್ರತಿ ಮುಸ್ಲಿಂ ವಸತಿಯನ್ನು ಶೋಧಿಸುವ ಪ್ರಸಂಗ ಬಂದರೂ ಹಿಂಜರಿಯದೆ ನಾವು ಧೈರ್ಯದಿಂದ ಅವುಗಳನ್ನವಲಂಬಿಸಬೇಕು. ಇನ್ನೊಂದು ಗಂಡಾಂತರವನ್ನು ಲಕ್ಷಿಸಿಯೂ ನಾವು ಕಠೋರ ಶಾಸನವನ್ನು ಕೈಕೊಳ್ಳುವದು ಅವಶ್ಯವಿದೆ. ಈಚೆಗೆ ನಿಜಾಮರೂ ಕಮ್ಯುನಿಸ್ಟರೂ ಗೆಳೆತನ ಬೆಳೆಸಿದ್ದುದು ನಮಗೆ ಗೊತ್ತಿದೆ. ಈಗ ಭೂಗತರಾದ ರಜಾಕಾರರು ತೆಲಂಗಣದಲ್ಲಿ ಪ್ರಬಲರಾಗಿರುವ ಕಮ್ಯುನಿಷ್ಟ ದರೋಡೆಕಾರರನ್ನು ಸೇರಿಕೊಳ್ಳುವ ಸಂಭವವಿದೆ. ಕಮ್ಯುನಿಷ್ಟರ ಸಾಹಸವೂ ರಜಾಕಾರರ ಶಸ್ತ್ರಾಸ್ತ್ರಗಳೂ ಕಲೆತವೆಂದರೆ ಮತ್ತೆ ಬ್ರಹ್ಮದೇಶದ ಪುನರಾವರ್ತನೆಯಾಗಲು ತಡಹಿಡಿಯಲಿಕ್ಕಿಲ್ಲ.

ಆಡಳಿತದಲ್ಲಿಯೂ ನಾವು ಆಮೂಲಾಗ್ರ ಶೋಧನೆಯನ್ನು ಕೈಕೊಳ್ಳಬೇಕು. ಮುಸ್ಲಿಮ ಅಧಿಕಾರಿಗಳನ್ನು ನಿಷ್ಕಾರಣವಾಗಿ ಪೀಡಿಸುವದು ಯಾರಿಗೂ ಬೇಕಿಲ್ಲ. ಆದರೆ ಲೋಕಾಪವಾದಕ್ಕಂಜಿ ಅಧಿಕಾರಿ ವರ್ಗದ ಪುನರ್ಘಟನೆಯನ್ನು ಮುಂದೆ ತಳ್ಳಬೇಕಿಲ್ಲ. ಇತ್ತೆಹಾದ್ ಮತ್ತು ರಜಾಕಾರ ಸಂಸ್ಥೆಗಳ ಶಕ್ತಿಬೆಳೆಯಲು ಹೈದರಾಬಾದದ ಅಧಿಕಾರಿ ವರ್ಗವೇ ಕಾರಣವಾಗಿತ್ತು. ಹೈದರಾಬಾದ ನಿವಾಸಿಗಳಿಗಿಂತ ಹೊರಗಿಂದಬಂದಮುಸ್ಲಿಮರೇಜಾತೀಯತೆಯ ಬೆಳವಣಿಗೆಗೆ ಹೆಚ್ಚುಸಹಾಯಮಾಡಿದ್ದಾರೆಂದು ೧೦—೧೫ ವರ್ಷಗಳ ಕೆಳಗೆ ವಿವೇಕಿ ಹೈದರಾಬಾದಿ ಮುಸ್ಲಿಮರು ಕೂಗಿಕೊಳ್ಳುತಿದ್ದರು. ಈಚೆಗೆ ಹೈದರಾಬಾದಿಗೆ ಬಂದ ೫—೬ ಲಕ್ಷ ಹೊರಗಿನ ಮುಸ್ಲಿಮರ ಹಿಂದುಮುಂದನ್ನೂ ಚನ್ನಾಗಿ ಪರೀಕ್ಷಿಸಬೇಕು.

ಇವೆಲ್ಲ ಕ್ರಮಗಳು ತತ್ಕಾಲದಲ್ಲಿ ಎಷ್ಟು ಕಠೋರವಾಗಿ ಕಂಡರೂ ಪ್ರಜಾತಂತ್ರಿ ಹೈದರಾಬಾದಿನ ರಚನೆಗಾಗಿ, ಹಿಂದು ಮುಸ್ಲಿಮ ಪ್ರಜೆಗಳ ನಿಜವಾದ ಹಿತಕ್ಕಾಗಿ ಅವು ಅತ್ಯವಶ್ಯವಾಗಿವೆ. ಹೈದರಾಬಾದಿನ ಮುಸ್ಲಿಮರಾದರೂ ಸುಖ ಸಂತೋಷಗಳಲ್ಲಿದ್ದಾರೆಂದು ಹೇಳಲು ಕಾರಣವಿಲ್ಲ. ೧೯೪೫ ರಲ್ಲಿ ಸಯ್ಯದ ಹಬೀಬ ಹಸನರೆಂಬ ಮುಸ್ಲಿಮ ಪ್ರಮುಖರು ತಮ್ಮ "Whither Hyderabad" (ಹೈದರಾಬಾದ ಎತ್ತ ಸಾಗಿದೆ) ಪುಸ್ತಕದಲ್ಲಿ ಮುಸ್ಲಿಮರ "ರಾಜಜಾತಿ" ತ್ವವನ್ನು ನಿರಸನಗೊಳಿಸುತ್ತ ಬರೆದುದನ್ನು ಇಲ್ಲಿ ಉದಾಹರಿಸಬಹುದು.

"ಹೈದರಾಬಾದ ಮುಸ್ಲಿಮರು ರಾಜಜಾತಿಯವರೆಂಬ ಹೇಳಿಕೆಯಲ್ಲಿ ಏನಾದರೂ ತಥ್ಯಾಂಶವಿದ್ದರೆ ಹೈದರಾಬಾದಿನಲ್ಲಿ ಒಬ್ಬನೇ ಒಬ್ಬ ಮುಸ್ಲಿಮ ಭಿಕ್ಷುಕನು ಇರಬಾರದಿತ್ತು. ಆದರೆ ವಾಸ್ತವಿಕವಾಗಿ ಬೀದಿಯಲ್ಲಿ ಸಿಗುವ ಭಿಕ್ಷುಕರಲ್ಲಿ ಅರ್ಧಕರ್ಧ ಮುಸ್ಲಿಮರೇ ಇರುವರು. ಕ್ರಿಮಿನಲ್ ಕೋರ್ಟುಗಳಲ್ಲಿ ಶಿಕ್ಷೆಗೊಳಗಾಗುವವರಲ್ಲಿ ಬಹುಸಂಖ್ಯಕರು, ಸಿವಿಲ್ ಕೋರ್ಟುಗಳಲ್ಲಿ ಡಿಕ್ರಿಗೀಡಾಗುವವರಲ್ಲಿ ಬಹುಸಂಖ್ಯಕರು,' ವಾರಂಟಿಗೆ ಒಳಗಾಗುವವರಲ್ಲಿ,! ಮಾರವಾಡಿಗಳಲ್ಲಿ ಸಾಲಪಡೆಯುವವರಲ್ಲಿ, ಹೆಂಡಂದಿರ ಆಭರಣಗಳನ್ನೂ ವಂಶಪಾರಂಪರ್ಯವಾಗಿ ವಸ್ತು ಒಡವೆಗಳನ್ನೂ ಒತ್ತೆ ಹಾಕುವವರಲ್ಲಿ ಅಧಿಕಾಂಶರು ಈ "ರಾಜಜಾತಿ"ಗೆ ಸೇರಿದವರು !"

ಮುಸ್ಲಿಮ ಹೈದರಾಬಾದಿಗಳ ನಿಜವಾದ ಸ್ಥಿತಿ ಹೀಗಿರುವದರಿಂದ ನಾವು ಇಡಿ ಹೈದರಾಬಾದದ ಹಿತಕ್ಕಾಗಿ ಕೈಕೊಳ್ಳುವ ಯಾವದೇ ಕ್ರಮದಿಂದ ಅವರಿಗೂ ಹಿತವಾಗುವಲ್ಲಿ ಸಂದೇಹವಿಲ್ಲ "ರಾಜಜಾತಿ", "ವಿಶೇಷ ಪ್ರಾತಿನಿಧ್ಯ"ದ ಹಟ ಇವೆಲ್ಲವುಗಳ ಮೋಹವನ್ನು ತೊರೆದು ಪ್ರಜಾತಂತ್ರಕ್ಕೆ ತಲೆವಾಗುವದರಲ್ಲೇ ಅವರ ಹಿತವಿದೆ.

---

ಮುಂಬಯಿಯಲ್ಲಿ ಸಾಂತಾಕ್ರೂಜದ ಜನರು ಗಣಪತಿ ವಿಸರ್ಜನದ ನಿಮಿತ್ತ 'ಗಾರ್ಭಾ ನೃತ್ಯ' ಏರ್ಪಡಿಸಿದ್ದರು. ಆಗ ಅದನ್ನು ನೋಡಲು ಒಂದು ದೊಡ್ಡ ಭಾವಿಯ ಮೇಲೆ ಮಾಡಿದ ಸಿಮೆಂಟ ಕಾಂಕ್ರೀಟಿನ ನೆಲ್ಲಕ್ಕಿಯ ಅನೇಕರು ಕುಳಿತಿದ್ದರು. ಅಕಸ್ಮಾತ್ ಈ ನೆಲ್ಲಕ್ಕಿ ಕುಸಿದು ಕುಳಿತವರೆಲ್ಲ ಬಾವಿಯಲ್ಲಿ ಬಿದ್ದರು. ನೃತ್ಯಕ್ಕಾಗಿ ಏರ್ಪಟ್ಟ ಮಂಟಪವೂ ಜನರ ಮೇಲೆ ಬಾಯಿಯಲ್ಲಿ ಬಿತ್ತು. ಇದರಿಂದ ಸುಮಾರು ೩೦ ಜನರು ಮರಣ ಹೊಂದಿದರೆಂದು ತಿಳಿಯುತ್ತದೆ.

---

# ಕರ್ನಾಟಕ

## ಧಾರವಾಡ

ಸವಣೂರಿನ ಮಾರ್ಕೆಟ ಹದ್ದಿಯಲ್ಲಿ ಎಲ್ಲ ಜನರಿಗೂ ಅನುಕೂಲವಾಗುವಂತೆ ಸುಬೋಧ ವಾಚನಾಲಯವು ೧೬ ಕ್ಕೆ ಸ್ಥಾಪಿತವಾಯಿತು. ಶ್ರೀ. ಪುರುಷೋತ್ತಮಾಚಾರ್ಯ ರಾಯಚೂರ ಇವರು ಪ್ರಾರಂಭೋತ್ಸವ ನಡೆಸಿದರು. ಶ್ರೀ ಮಹಾಲಿಂಗಪ್ಪಾ ಹಾವಣಗಿಕರವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಸಭೆ ಸೇರಿತು. ಸತ್ಯಬೋಧ ಸೇವಾಸಂಘದ ಪರವಾಗಿ ೨೦೦ ಪುಸ್ತಕ ಮತ್ತು ಒಂದು ಕಪಾಟನ್ನು ವಾಚನಾಲಯಕ್ಕೆ ಕೊಡಲಾಯಿತು.

ಕನ್ನಡ ಪಠ್ಯ ಪುಸ್ತಕ ಸಮಿತಿಯ ಕಾರ್ಯದರ್ಶಿಗಳಾಗಿದ್ದ ಶ್ರೀ ಅಯ. ಸಿ. ತಂಬದ ಬಿ. ಎ. ಬಿ. ಟಿ. ಇವರು ಸಮಿತಿಯ ಸಭೆಗಾಗಿ ಕಳೆದ ರವಿವಾರ ಪುಣೆಗೆ ಹೋಗಿದ್ದರು. ಪುಣೆಯಲ್ಲಿ ಮಂಗಳವಾರ ಮುಂಜಾನೆ ಸ್ನಾನಗೃಹಕ್ಕೆ ಹೊರಡುವಾಗ ಒಮ್ಮೆಲೆ ಹೃದಯಕ್ರಿಯೆ ನಿಂತು ಅವರು ಕೈಲಾಸವಾಸಿಗಳಾದರೆಂದು ತಿಳಿಸಲು ವಿಷಾದಿಸುತ್ತೇವೆ. ಆರೋಗ್ಯಮಂತ್ರಿ ಡಾ. ಗಿಲ್ಡರರು ಉಪಚಾರಕ್ಕೆ ಹೋದರೂ ಅವರನ್ನು ಬದುಕಿಸಿಕೊಳ್ಳುವದು ಸಾಧ್ಯವಾಗಲಿಲ್ಲ. ಪರಮಾತ್ಮನು ಇವರ ಆತ್ಮಕ್ಕೆ ಶಾಂತಿಯನ್ನೀಯಲಿ.

ನವಲಗುಂದದ ಒಂದನೇ ನಂಬರ ಸೊಸಾಯಿಟಿಯ ಚೇರಮನ್‌ರಾದ ಶ್ರೀಯುತ ಚನ್ನಪ್ಪನವರು ಮಿರ್ಜಿ ಇವರು ಬೆಳ್ಳಿ ಹಬ್ಬದ ಹೈಸ್ಕೂಲಿನ ಊರ್ಜಿತೆಗಾಗಿ ಮುನಿಸಿಪಲ್ ಸಮಾರಂಭದ ಕಾಲಕ್ಕೆ ೧೦೦೧ ರೂಪಾಯಿ ಸಲ್ಲಿಸಿದರು.

ಇದೇ ನವಂಬರ ಮೊದಲನೇ ವಾರದಲ್ಲಿ ಕೂಡಲಿರುವ ಕರ್ನಾಟಕ ವಕೀಲರ ಪರಿಷತ್ತಿನ ಸ್ವಾಗತಸಮಿತಿಯು ರಚಿತವಾಗಿದೆ. ಇದಕ್ಕೆ ಸರಕಾರೀ ವಕೀಲರಾದ ಶ್ರೀ ಎಸ್. ಎಚ್. ಮಳೀಮಠರು ಅಧ್ಯಕ್ಷರು, ಎಲ್. ಆರ್. ದುರ್ಗರು ಕಾರ್ಯದರ್ಶಿ ಮತ್ತು ಬಿ ಜಿ ವೈದ್ಯರು ಜೊತೆ ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟರು. ಪರಿಷತ್ತಿನ ವ್ಯವಸ್ಥೆ ಭರದಿಂದ ಸಾಗಿದೆ.

ನವಲಗುಂದದ ದಿವಂಗತ ಸೌ. ರಿಂದಾಬಾಯಿ ದೇಶಪಾಂಡೆ ಇವರ ಸ್ಮರಣಾರ್ಥ, ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಒಂದನೇ ನಂಬರ ಬಂದ ಧಾರವಾಡ ಜಿಲ್ಲೆಯ ಮನ್ನಣೆ ಹೊಂದಿದ ಮಾಧ್ಯಮಿಕ ಶಾಲೆಗಳ ವಿದ್ಯಾರ್ಥಿನಿಗೆ ಬಹುಮಾನ ಕೊಡಲು ೫೦೦ ರೂ. ಸರಕಾರಿ ಪ್ರೊಮಿಸರಿ ನೋಟನ್ನು ಕೊಟ್ಟದ್ದು ಸರಕಾರದವರು ಈ ದಾನವನ್ನು ಸ್ವೀಕರಿಸಿದ್ದಾರೆ.

ಧಾರವಾಡ ಕೆ ಈ ಬೋರ್ಡ ಆರ್ಟ್ಸ ಕಾಲೇಜಿನಲ್ಲಿ ಮಹಾತ್ಮಾ ಗಾಂಧಿಯವರ ತೈಲಚಿತ್ರದ ಅನಾವರಣ ಸಮಾರಂಭವು ಮಹಾತ್ಮಾ ಗಾಂಧಿ ಗ್ರಂಥಾಲಯದ ಉದ್ಘಾಟನವು ಅರ್ಥಸಚಿವರಾದ ಮಾನ್ಯ ವೈಕುಂಠಲಾಲ ಇವರಿಂದ ಇದೇ ಅಕ್ಟೋಬರ ೨ ಕ್ಕೆ ಜರಗುವದು. ಈ ಬಗ್ಗೆ ಮುನಸಿಪಾಲಿಟಿ ಆಟ್ಟದ ಮೇಲೆ ಸಭೆ ಜರಗುವದು.

ಹುಬ್ಬಳ್ಳಿಯ ಕೇಶವಾಪುರ ಭಾಗದಲ್ಲಿ ಅಮಿರುದ್ದೀನ ಉಸ್ಮಾನ ಸಾಹೇಬ ಎಂಬವನ ಮನೆಯನ್ನು ಝಡತಿ ಮಾಡಲಾಗಿ ಪೋಲೀಸರಿಗೆ ಒಂದು ಕಾಡತೂಸು, ಅದನ್ನು ಮಾಡುವ ಸಲಕರಣೆಗಳು ಮತ್ತು ನಿಜಾಮರ ಪೋಟೋ ಮೊದಲಾದವುಗಳು ದೊರೆತಿವೆ. ಅವನ್ನೆಲ್ಲ ಜಪ್ತ ಮಾಡಿ ಮುಂದಿನ ವಿಚಾರಣೆ ನಡೆಸಿದ್ದಾರೆ.

## ಉತ್ತರಕನ್ನಡ

ಸಾರ್ವಜನಿಕ ಸುರಕ್ಷಿತತೆ ಕಾಯಿದೆಯನ್ವಯ ಬಂಧಿಸಲ್ಪಟ್ಟ ಶ್ರೀ ಜಿ. ಎಚ್. ಶಮಸುದ್ದೀನ ಸಾಹೇಬ ಎಂ. ಎಲ್. ಎ ಇವರನ್ನು ಮತ್ತು ಇವರ ಜೊತೆಗಿದ್ದ ೫ ಜನ ಇತರ ಸ್ಥಾನಬದ್ಧರನ್ನು ಇಷ್ಟರಲ್ಲಿಯೇ ಬಿಡುಗಡೆ ಮಾಡಲಿರುವರೆಂದು ತಿಳಿಯುತ್ತದೆ.

ಕಾರವಾರದಿಂದ ೬-೮ ಮೈಲಿನ ಮೇಲಿರುವ ಗೋವಾಗಡಿಯಲ್ಲಿ ಮಾಜಾಳಿ ಹತ್ತಿರ ಗೋವಾ ಪೋಲೀಸ ನಾಕೆಯಲ್ಲಿ ಅಲ್ಲಿಯ ಸರಕಾರದವರು ತೋಫು ಸಹಿತ ಸಿದ್ದೀಜನರ ಒಂದು ತಂಡನ್ನು ತಂದಿಟ್ಟದ್ದಾಗಿ ತಿಳಿಯುತ್ತದೆ. ಗೋವಾಕಡೆಯಲ್ಲೆಲ್ಲ ಹೀಗೆ ದಂಡು ಇಡಲಾಗಿದೆಯೆಂದು ತಿಳಿಯುತ್ತದೆ.

ಶ್ರೀ. ಬಿ. ಕೆ. ಪೋತದಾರರನ್ನು ಹಳ್ಯಾಳ ಮುನಿಸಿಪಾಲಿಟಿಯ ಆಡಳಿತಗಾರರೆಂದು ನೇಮಿಸಲಾಗಿದೆ.

## ಬೆಳಗಾವಿ

ಮಹಾತ್ಮಾ ಗಾಂಧಿಯವರ ಕೊಲೆಯ ನಂತರ ಸಂಭವಿಸಿದ ಗಲಭೆಗಳಿಗೆ ಸಂಬಂಧಿಸಿದ ಖಟ್ಲೆಗಳ ವಿಚಾರಣೆಯಲ್ಲಿ ಮೂರನೇ ತಂಡದ ತೀರ್ಪು ಹೇಳಲ್ಪಟ್ಟಿತು. ಅದರಲ್ಲಿ ೧೦ ಜನರಿಗೆ ೨ ರಿಂದ ೩ ವರ್ಷಗಳ ವರೆಗೆ ಬೇರೆ ಬೇರೆ ಅವಧಿಯ ಶಿಕ್ಷೆ ವಿಧಿಸಲಾಯಿತು. ಒಬ್ಬನನ್ನು ನಿರ್ದೋಷಿಯೆಂದು ಬಿಡುಗಡೆ ಮಾಡಲಾಯಿತು.

ಸಾಂಗಲಿಯ ನಾಂದ್ರೆ ಎಂಬ ಹಳ್ಳಿಯಲ್ಲಿ ಒಂದು ಮನೆಯಲ್ಲಿ ೬ ಪಿಸ್ತೂಲು ಕೆಲವು ಕಾಡತೂಸುಗಳು ದೊರೆತಿವೆ. ಮಿರಜಿಯಲ್ಲಿಯೂ ಕೆಲ ದಿನಗಳ ಹಿಂದೆ ಒಂದು ಪಿಸ್ತೂಲು ದೊರಕಿತೆಂದು ತಿಳಿಯುತ್ತದೆ.

ನಿಜಾಮ ಪೋಲಿಸ ಶಾಖೆಯಲ್ಲಿ ವರಿಷ್ಠ ಅಧಿಕಾರಿಯಾಗಿದ್ದನೆಂದು ಹೇಳಲಾಗುತ್ತಿರುವ ಮಹಮ್ಮದ ಫೈಜುಲ್ಲಾ ಶೇಖ ಅಸದುಲ್ಲಾ ಎಂಬ ಸಿಕಂದರಾಬಾದದ ಗೃಹಸ್ಥನು ಬೆಳಗಾವಿಯಲ್ಲಿ ನಿಜಾಮರ ಪರವಾಗಿ ಗುಪ್ತಕಾರಸ್ಥಾನ ನಡೆಸುತಿದ್ದನೆಂಬ ಸಂಶಯದಿಂದ ಸೆರೆಹಿಡಿಯಲ್ಪಟ್ಟಿರುವನು. ಚಿತ್ತೂರಲ್ಲಿ ಇದೇ ಕಾರಣಕ್ಕಾಗಿ ಮುಗುಟ ಸಾಹೇಬ ಸಾಸವಾಲೆ ಎಂಬಬ್ಬನ್ನು ಹಿಡಿದಿರುವರು.

## ವಿಜಾಪುರ

ಸಿಂದಗಿ ತಾಲೂಕಿನ ಬಳಗಾನೂರಲ್ಲಿ ಎಲ್ಲ ಶಿಕ್ಷಕರು ೬ ನೇ ತಾರೀಕು ಗಣೇಶಚತುರ್ಥಿ ದಿನ ಹರಿಜನ ಓಣಿಗೆ ಹೋಗಿ ಅವರು ಮಾಡುತ್ತಿದ್ದ ಭಜನೆ ಮುಂತಾದ್ದನ್ನು ನೋಡಿಕೊಂಡು ಬಂದರು. ಹೆಡ್ ಮಾಸ್ತರರು ಉಪದೇಶಪರ ಕೆಲ ಮಾತುಗಳನ್ನು ಹೇಳಿದರು. ೪೦ ಜನರ ಒಂದು ಪ್ರೌಢ ಶಿಕ್ಷಣವರ್ಗವೂ ಪ್ರಾರಂಭವಾಗಿದೆ.

ಬಾಗಲಕೋಟೆಯ ಮಕ್ಕಳ ವಿದ್ಯಾಮಂಡಳದವರ ವಾರ್ಷಿಕೋತ್ಸವದ ಕಾಲಕ್ಕೆ ಅಲ್ಲಿಯ ಬರ್ಮಾಶೆಲ್ ಏಜಂಟರಾದ ಕಿಸನ ಶಿವನಾಥ ಇವರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ ೫೦೦ ರೂ. ಕಾಣಿಕೆ ಕೊಟ್ಟರು. ಇದರಂತೆ ಶ್ರೀ ನಾರಾಯಣ ಜಿಂಗಾಡೆಯವರು ೨೫೦ ರೂ. ಕೊಡುವ ಆಶ್ವಾಸನವಿತ್ತರು.

ಮುಂಬಯಿ ಸರಕಾರದ ಔದ್ಯೋಗಿಕ ಹಾಗು ಹಿಂದುಳಿದ ಜಾತಿಗಳ ಮಂತ್ರಿಗಳಾದ ಮಾನ್ಯ ತಪಾಸೆಯವರು ೧೯ ಕ್ಕೆ ಜಮಖಂಡಿಗೆ ಹೋಗಿ ಹಾಯಸ್ಕೂಲ ಮತ್ತು ಮುನಸಿಪಾಲಿಟಿಗೆ ಭೆಟ್ಟಿ ಕೊಟ್ಟರು. ಹರಿಜನ ವಸತಿಗೆ ಹೋಗುವ ಪೂಲಿನ ಉದ್ಘಾಟನೆ ಮಾಡಿದರು. ಹರಿಜನ ವಿದ್ಯಾರ್ಥಿ ಗೃಹದ ಉದ್ಘಾಟನೆಯು ನಡೆಯಿತು. ಕಾಂಗ್ರೆಸ್ಸಿಗರ ಮತ್ತು ಉದ್ಯೋಗಸ್ಥರಗೂಡ ವಿಚಾರ ವಿನಿಮಯ ನಡೆಯಿತು. ಜಮಖಂಡಿಯಲ್ಲಿ ನೇಯ್ಗೆ ಉದ್ಯೋಗಕ್ಕೆ ಪ್ರೋತ್ಸಾಹ ಕೊಡುವದಕ್ಕಾಗಿ ಒಂದು ನೂಲಿನ ಯಂತ್ರಕ್ಕೆ ಮಂಜೂರಿ ಕೊಡಲಾಗಿದೆಂದು ಹೇಳಿದರು.

ಬದಾಮಿ ತಾಲೂಕಿನಲ್ಲಿ ಒಂದು ತಿಂಗಳ ವರೆಗೆ ಯಾರೂ ಯಾವದೇ ಸಾರ್ವಜನಿಕ ಸ್ಥಳದಲ್ಲಿ ಆಯುಧಗಳನ್ನೂ ಡೊಣ್ಣೆಗಳನ್ನೂ ಧರಿಸಬಾರದೆಂದು ವಿಧಿಸಲಾಗಿದೆ. ಶಸ್ತ್ರಾಸ್ತ್ರಗಳನ್ನಾಗಲಿ ಕಲ್ಲುಗಳನ್ನಾಗಲಿ ಸಂಗ್ರಹಿಸಬಾರದೆಂದು ವಿಧಿಸಲಾಗಿದೆ.

## ಕನ್ನಡಸಂಸ್ಥಾನ

ಶಿವಮೊಗ್ಗಿ ಹಿಂದೂ ಮಹಾಸಭೆಯ ಪರವಾಗಿ ೨೦ ಕ್ಕೆ ಜಾಹೀರ ಸಭೆ ಸೇರಿ ಹೈದರಾಬಾದ ಯುದ್ಧ ಯಶಸ್ವಿಯಾಗಿ ಕೊನೆಗಂಡದ್ದಕ್ಕೆ ಸರಕಾರವನ್ನಭಿನಂದಿಸಲಾಯಿತು, ಅಲ್ಲಿ ಕಷ್ಟನಷ್ಟಗಳಿಗೊಳಗಾದವರಿಗೆ ಯೋಗ್ಯ ಪರಿಹಾರಕೊಡಬೇಕು, ಅಲ್ಲಿನ ಭಾಗಗಳನ್ನು ಭಾಷಾನ್ವಯವಾಗಿ ಕರ್ನಾಟಕ, ಮಹಾರಾಷ್ಟ್ರ ಅಂಧ್ರ ಪ್ರಾಂತಗಳಲ್ಲಿ ಹಂಚಿಬಿಟ್ಟು ಅಸಫಜಾಹಿ ಆಳಿಕೆಯನ್ನು ಕೊನೆಗಾಣಿಸಬೇಕು ಮುಂತಾಗಿ ಗೊತ್ತುವಳಿಗಳಾದವು.

ಶಿವಮೊಗ್ಗಿಯಲ್ಲಿ ಒಂದು ಬೇವಿನ ಬೊಡ್ಡಿಯಲ್ಲಿ ಮಾಡಿದ ಗಣಪತಿಯ ಮೂರ್ತಿಯನ್ನು ನೋಡಲು ದುರ್ಗಿ ಗುಡಿಯ ಒಂದು ಮನೆಗೆ ತಂಡತಂಡವಾಗಿ ಬರುತಿದ್ದಾರೆ. ಒಬ್ಬನು ಆ ಬೇವಿನಬೊಡ್ಡಿಯನ್ನು ಒಡೆಯುತಿದ್ದಾಗ ಸೊಂಡೆ ಕಣ್ಣು ಕಿವಿಗಳಿಂದ ಯುಕ್ತವಾದ ಗಣಪತಿಯ ಮೂರ್ತಿಯು ಅದರಲ್ಲಿ ಮಾಡಿದ್ದು ಅವನಿಗೆ ಕಾಣಿಸಿತು. ಅವನು ಅದನ್ನು ಒಡೆಯುವದನ್ನು ಬಿಟ್ಟು ಪೂಜೆಗಾಗಿ ಅದನ್ನು ಇಟ್ಟಿದ್ದಾನೆ.

ಹೈದರಾಬಾದ ಯುದ್ಧ ಮುಕ್ತಾಯವಾದ್ದರಿಂದ, ಬೆಂಗಳೂರಲ್ಲಿ ಸ್ಥಾನಬದ್ಧತೆಯಲ್ಲಿ ಇಡಲ್ಪಟ್ಟ ಮುಸಲ್ಮಾನರನ್ನೆಲ್ಲ ಬಂಧಮುಕ್ತಮಾಡಲಾಯಿತು.

## ದಕ್ಷಿಣ ಕನ್ನಡ

ಮಂಗಳೂರು ಪೌರ ಸಭೆಯು ತನ್ನ ಎಲ್ಲಾ ನೌಕರರಿಗೂ ೧—೧—೪೭ ರಿಂದ ತುಟ್ಟಿ ಭತ್ತೆಯನ್ನು ಕೊಡುವ ನಿರ್ಧಾರ ಮಾಡಿತು. ನುಸಿಗಳ ಕಾಟವನ್ನು ತಪ್ಪಿಸುವುದಕ್ಕಾಗಿ ವಿಶೇಷ ಕಾರ್ಯ ಕೈಕೊಳ್ಳುವುದೆಂದೂ ಆ ಪ್ರಯುಕ್ತ [illegible] ಕೆರೆಯನ್ನು ಮುಚ್ಚುವುದೆಂದೂ ನಿರ್ಣಯವಾಗಿದೆ.

ಮಂಗಳೂರಿನ ಬೆಸೆಂಟ್ ರಾಷ್ಟ್ರೀಯ ಬಾಲಿಕಾ ಪಾಠಶಾಲೆಯ ವಿದ್ಯಾರ್ಥಿನಿ ವೃಂದವು ಎಲ್ಲಾ ದರ್ಜೆಗಳಿಂದ ಕೂಡಿ ೧೦೦ ರೂಪಾಯಿಯನ್ನು ಗಾಂಧೀ ಸ್ಮಾರಕ ನಿಧಿಗೆ ಅರ್ಪಿಸಿರುವುದು. ಇದನ್ನು ಜಿಲ್ಲಾ ಸಮಿತಿಯ ಕಾರ್ಯದರ್ಶಿಗಳು ಶ್ಲಾಘಿಸಿರುವರು.

ದಿನಾಂಕ ೧೧ ರಂದು ಜರುಗಿದ ಉಡುಪಿ ಪೌರ ಸಭೆಯಲ್ಲಿ ಪೌರ ಸಭಾಡಳಿತದ ಗತ ವರ್ಷದ ವರದಿಯನ್ನು ಕುರಿತು ಜಿಲ್ಲಾ ಕಲೆಕ್ಟರರು ಮಾಡಿದ ಸೂಚನೆಗಳನ್ನು ಓದಲಾಯಿತು. ನಗರಾಡಳಿತೆಯೊಳಗಿನ ರಸ್ತೆಗಳ ವ್ಯವಸ್ಥೆ ತೃಪ್ತಿಕರವಾಗಿಲ್ಲ. ಹೈವೇ ಇಲಾಖೆಯ ರಸ್ತೆಗಳೂ ತೃಪ್ತಿಕರವಾಗಿಲ್ಲ. ಸಾರ್ವಜನಿಕ ಆರೋಗ್ಯವು ತೃಪ್ತಿಕರ. ಪ್ರಾಥಮಿಕ ಶಾಲೆಗಳ ವಿದ್ಯಾರ್ಥಿಗಳ ಸಂಖ್ಯೆ ಇತ್ಯಾದಿಯಲ್ಲಿ ಅಭಿವೃದ್ಧಿ. ವಾರ ಮತ್ತು ದಿನವಹಿ ಸಂತೆಗಳನ್ನು ಇನ್ನೂ ಸ್ವಚ್ಛವಾಗಿಡಬೇಕು. ಸ್ಥಳಾಶ್ರಮುಖ ಪತ್ತೆ ಹುರುಪಿನದಾಗಬೇಕು. ತೆರಿಗೆ ವಸೂಲಿ ತೃಪ್ತಿಕರ—ಇತ್ಯಾದಿ ಅಭಿಪ್ರಾಯವು ಕಲೆಕ್ಟರರ ರಿಮಾರ್ಕಿನಲ್ಲಿದೆ. ಸಭೆಯು ಅಶಕ್ತ ಮತ್ತು ಬಡಮಕ್ಕಳಿಗೆ ಹಾಲನ್ನೀಯಲು ೩೦೦ ರೂಪಾಯಿ ಮಂಜೂರು ಮಾಡಿದೆ.

ದಿನಾಂಕ ೧೨ ರಂದು ತೆಕ್ಕಟ್ಟೆ ಬೋರ್ಡು ಶಾಲೆಯಲ್ಲಿ ಗ್ರಾಮ ಸೇವಾ ಸಮಿತಿಯವರ ನೇತೃತ್ವದಲ್ಲಿ ಒಂದು ರಿಕ್ರಿಯೇಶನ್ ಸಮಾರಂಭ ಜರುಗಿತು. ಪಂದ್ಯಾಟ, ಇನಾಮು ಹಂಚುವಿಕೆ, ವರದಿ ವಾಚನ, ಯಕ್ಷಗಾನ ಇತ್ಯಾದಿ ಕಾರ್ಯಕ್ರಮಗಳಿದ್ದುವು. ಜಿಲ್ಲಾ ಕಲೆಕ್ಟರ್ ಎಸ್. ಆರ್. ಕೈವಾರ್ ಅಧ್ಯಕ್ಷರಾಗಿದ್ದರು

ಪ್ರಾಂತಿಕ ಕ್ಷೇಮ ಚಿಂತನೆಯ ನಿಧಿಯ ಜಿಲ್ಲಾ ಶಾಖೆಯ ಸಭೆಯು ದಿನಾಂಕ ೧೧ ರಂದು ಕಲೆಕ್ಟರರ ಕಚೇರಿಯಲ್ಲಿ ಡಾ. ಯು. ಪಿ. ಮಲ್ಯರ ಅಧ್ಯಕ್ಷತೆಯಲ್ಲಿ ಜರಗಿದಾಗ ಡಾ. ವಾಸುದೇವರಾಯರು ಕ್ಷಯ ರೋಗದ ವಿಚಾರವಾಗಿ ಬೋಧಪ್ರದವಾದ ಭಾಷಣ ಮಾಡಿದರು.

## ಬಳ್ಳಾರಿ

ಹಡಗಲಿ ತಾಲೂಕಿನ ಇಟ್ಟಿಗಿಗ್ರಾಮಸ್ಥರು ಹೈದರಾಬಾದ ಯುದ್ಧದಲ್ಲಿ ಭಾರತ ಸೈನಿಕರು ಯಶಸ್ವಿಯಾದುದಕ್ಕಾಗಿ ಅವರನ್ನಭಿನಂದಿಸುವದಕ್ಕಾಗಿ ೧೮ ಕ್ಕೆ ಟಿ. ನರಸಿಂಹರಾಯರ ಅಧ್ಯಕ್ಷತೆಯಲ್ಲಿ ಸಭೆಸೇರಿದ್ದಿತು. ಅಭಿನಂದನಪರ ಗೊತ್ತುವಳಿಯಾಗಿ ಹುಡುಗರಿಗೆ ಪಣಿವಾರ ಹಂಚಲಾಯಿತು. ಸಾಯಂಕಾಲ ಸುಮಾರು ೬೦೦ ಬಡಜನರಿಗೆ ಅನ್ನ ಕೊಡಲಾಯಿತು ಚಿಣಿವಾಲಕಟ್ಟೆಗೆ ಗಾಂಧೀಜಿಯ ಹೆಸರಿಡಲಾಯಿತು.

## ಮಂಗಳೂರಲ್ಲಿ ಭಾಷಾನ್ವಯ ಪ್ರಾಂತರಚನಾ ಸಮಿತಿ

### ಕೊಡಗಿನವರೂ ಸಾಕ್ಷಿ ಇತ್ತರು

[illegible] ಸಮಿತಿಯಿಂದ ನೇಮಿಸಲ್ಪಟ್ಟ ಭಾಷಾಪ್ರಾಂತ ರಚನಾ ಸಮಿತಿಯವರು ದಿನಾಂಕ ೧೪ ರಂದು ಸಂಜೆ ಮಂಗಳೂರಿಗೆ ಬಂದರು. ಸಮಿತಿಯಲ್ಲಿ ಅಧ್ಯಕ್ಷರಾಗಿ ಎಸ್. ಕೆ. ಧಾರ್ [illegible], ಡಾ. ಪನ್ನಾಲಾಲ್ ಮತ್ತು ಶ್ರೀ ಜಿ. ಕೆ. ಬ್ಯಾನರ್ಜಿ (ಕಾರ್ಯದರ್ಶಿ) [illegible] (ಕರ್ನಾಟಕ) ಎಂ. [illegible] (ಕೇರಳ) ಇವರೂ ಇದ್ದರು. [illegible] ಶ್ರೀ ಕೆ. ಬಿ. [illegible] ಶ್ರೀ ಎಸ್. ಆರ್. ಕೈವಾರ್ (ಜಿಲ್ಲಾ ಕಲೆಕ್ಟರ್) ಮೊದಲಾದ ಅಧಿಕಾರಿಗಳೂ ಸ್ವಾಗತಿಸಿದರು.

ಮರುದಿನ ಸಾಕ್ಷಿಗಳನ್ನು ತೆಗೆದುಕೊಳ್ಳಲಾಯಿತು. ಕೊಡಗಿನ ಪರವಾಗಿ ನಾಲ್ಕು [illegible] ಜನಗಳಾಗಿ ಸಾಕ್ಷಿ ತೆಗೆದುಕೊಳ್ಳಲಾಗಿದೆ. ಅವರೆಲ್ಲರೂ ಕೊಡಗನ್ನು ಕೇರಳದೊಂದಿಗೆ ಸೇರಿಸಬಾರದೆಂದೂ ಒಂದು ಗುಂಪಿನವರು ಮಾತ್ರ ಕೊಡಗನ್ನು ಪ್ರತ್ಯೇಕ [illegible] ಸರಕಾರದ ಸಂಸ್ಥಾನವಾಗಿರಿಸಬೇಕೆಂದೂ ಉಳಿದ ಬಹುಪಕ್ಷದವರು ಕರ್ನಾಟಕದೊಂದಿಗೆ ಲೀನಗೊಳಿಸಬೇಕೆಂದೂ ತಿಳಿಸಿದರು. ಕೊಡಗಿನ ೧,೬೮,೦೦೦ ಪ್ರಜೆಗಳ ಪೈಕಿ ೪೪,೦೦೦ ಕೊಡವರಲ್ಲಿ ಕೆಲವರು ಮಾತ್ರ ತಮಗೆ ಪ್ರತ್ಯೇಕ ಪ್ರಾಂತಬೇಕೆಂಬ ಅಭಿಪ್ರಾಯದವರು. ಕೊಡಗಿನ ಸರಕಾರ ಮತ್ತು ಶಿಕ್ಷಣದ ಭಾಷೆಯು ಕನ್ನಡವೆಂದೂ ವ್ಯವಹಾರದಲ್ಲಿ ಕನ್ನಡ ಮತ್ತು ಅಲ್ಪಸ್ವಲ್ಪ ಮಳಯಾಳಿ ಇದೆಯೆಂದೂ ತಿಳಿಸಿದರು. ಅಲ್ಲಿನ ಡಿವೆಲಪ್‌ಮೆಂಟ್ ಅಧಿಕಾರಿಗಳಾದ ಶ್ರೀ. ಎ. ಸಿ. ಸುಬ್ಬಯ್ಯನವರು ಕೊಡಗಿನ ಅಭಿವೃದ್ಧಿಯ ದೃಷ್ಟಿಯಿಂದ ಕೊಡಗನ್ನು ದೊಡ್ಡ ಪ್ರಾಂತದೊಡನೆ ಸೇರಿಸಬೇಕೆಂದು ತಮ್ಮ ಅನುಭವವನ್ನು ಹೇಳಿದರು.

ದಕ್ಷಿಣ ಕನ್ನಡ ಪರವಾಗಿ ನಾಲ್ಕು ಸಂಘಗಳಾಗಿ ಸಾಕ್ಷಿ ತೆಗೆದುಕೊಳ್ಳಲಾಗಿದೆ. ಎಲ್ಲರೂ ದಕ್ಷಿಣ ಕನ್ನಡ ಕರ್ನಾಟಕದೊಂದಿಗೆ ಲೀನವಾಗಬೇಕೆಂದೂ ಕೇರಳದ ಕೇಳಿಕೆಯು ನಿರಾಧಾರವಾದುದೆಂದೂ ತಿಳಿಸಿದರು. ಕಾಸರಗೋಡು ತಾಲೂಕು ಕರ್ನಾಟಕಕ್ಕೆ ಸೇರಬೇಕೆಂದು ಅಲ್ಲಿನ ಜನರ ಪರವಾಗಿ ಒಂದು ಮನವಿಯನ್ನು ಶ್ರೀ ಬಿ. ಎಸ್. ಕಕ್ಕಿಲ್ಲಾಯರೂ ಮುಸ್ಲಿಂ ಪ್ರಜೆಗಳ ಪರವಾಗಿ ದ. ಕ. ಮುಸ್ಲಿಂ ಲೀಗಿನ ಅಧ್ಯಕ್ಷ ಶ್ರೀ ಎಚ್. ಎಚ್. ಅಹಮ್ಮದರು ಒಂದು ಮನವಿಯನ್ನು ಪ್ರತ್ಯೇಕವಾಗಿ ಸಮರ್ಪಿಸಿರುವರು. ದ. ಕನ್ನಡದ ಸಾಕ್ಷಿದಾರರಲ್ಲಿ ಒಬ್ಬರು ಮೈಸೂರನ್ನುಳಿದ ಕರ್ನಾಟಕ ಪ್ರಾಂತದಿಂದ ದಕ್ಷಿಣ ಕನ್ನಡಕ್ಕೆ ಹೆಚ್ಚಿನ ಹಾನಿ ಇದೆಯೆಂದು ತಿಳಿಸಿದರಲ್ಲದೆ ಮೈಸೂರು ಕರ್ನಾಟಕದೊಂದಿಗೆ ಬರುವಂತಾಗಬೇಕೆಂದರು. ಒಬ್ಬರು ಮಾತ್ರ ಭಾಷಾವಾರ ಪ್ರಾಂತ ರಚಿಸಬಾರದೆಂದು ಪ್ರತಿಪಾದಿಸಿದರು.

ದಿನಾಂಕ ೧೬ ರಂದು ಸಂಜೆ ಮಂಗಳೂರಿನ ಪೌರಸಭೆಯು ಭಾಷಾವಾರು ರಚನಾ ಸಮಿತಿಗೊಂದು ಬಿನ್ನವತ್ತಳೆಯನ್ನು ಅರ್ಪಿಸುವ ಸಮಾರಂಭವನ್ನು ಬೆಸೆಂಟ ಬಾಲಿಕಾ ಪಾಠಶಾಲೆಯ ಪ್ರಾರ್ಥನಾ ಭವನದಲ್ಲಿ ಜರಗಿಸಿತು. ಸಭಾರಂಭದಲ್ಲಿ ಶ್ರೀ ಕೆ. ಬಿ. ಜಿನರಾಜ ಹೆಗ್ಗಡೆಯವರು ಅತಿಥಿಗಳನ್ನು ಸಭಿಕರಿಗೆ ಪರಿಚಯ ಮಾಡಿಸಿದರು. ಪೌರಸಭಾಧ್ಯಕ್ಷ ಶ್ರೀ ಎಲ್. ಸಿ. ಪಾಯಸರು ಸಮಿತಿಗೆ ಮೊದಲೆ ಸಮರ್ಪಿಸಿದ್ದ ಬಿನ್ನವತ್ತಳೆಯ ಪ್ರತಿಗಳನ್ನು ಅವರಿಗಿತ್ತರು. ಲಘು ಫಲಾಹಾರವಾದ ಮೇಲೆ ಸಮಿತಿಯ ಸದಸ್ಯರು ನಗರ ಸಂಚಾರಾರ್ಥವಾಗಿ ಹೋದರು.

# ಹಿಂದುಸ್ತಾನ

## ಮುಂಬಯಿ

ಮುಂಬಯಿಯ ಮುಖ್ಯ ಮಂತ್ರಿಗಳಾದ ಬಾಳಾಸಾಹೇಬ ಖೇರರು ಶಾಸನ ಸಭೆಯಲ್ಲಿ ಮಾತನಾಡುತ್ತ, ಹಿಂದುಸ್ತಾನದ ವಿಶೇಷತಃ ಮುಂಬಯಿ ಪ್ರಾಂತದ ನಾಗರಿಕರು, ಹೈದರಾಬಾದದಲ್ಲಿ ಸೈನಿಕ ಕ್ರಮ ನಡೆದಾಗ ಶಾಂತಿ ಸುವ್ಯವಸ್ಥೆಯನ್ನು ಕಾಯ್ದುಕೊಂಡುದಕ್ಕೆ ಎಲ್ಲರನ್ನೂ ಅಭಿನಂದಿಸುವದಾಗಿ ಹೇಳಿದರು. ಅವರು ಮುಂದರಿಯುತ್ತ, ಜಾತ್ಯತೀತ ತತ್ವಗಳಿಗೆ ಅಂಟಿಕೊಂಡು ಸಾಗಿರುವ ಯಾವುದಾದರೂ ಪ್ರಜಾ ಸರಕಾರವಿದ್ದರೆ ಅದು ಪಂ. ನೆಹರೂರ ನೇತೃತ್ವದಲ್ಲಿರುವ ಹಿಂದುಸ್ತಾನ ಸರಕಾರವೊಂದೇ ಎಂದು ಹೇಳಲು ಸಭೆಯು ಹರ್ಷೋದ್ಗಾರಗಳಿಂದ ಮುಖರಿತವಾಯಿತು.

ಹೈದರಾಬಾದದಲ್ಲಿ ಶ್ರೀ. ಕೆ ಎಂ. ಮುನಶಿಯವರಿಗೆ ಅಸ್ವಾಸ್ಥ್ಯವಿದ್ದು ನಾಮಾಂಕಿತ ಡಾಕ್ಟರರು ಚಿಕಿತ್ಸೆ ಮಾಡುತ್ತಿದ್ದಾರೆ. ಮುಂಬಯಿಯಿಂದ ಡಾ. ಸುಖಠಣಕರ ಮತ್ತು ನಥೂಭಾಯಿ ಪಟೇಲ ಇವರು ತಾ. ೨೧ ಕ್ಕೆ ವಿಶೇಷ ವಿಮಾನದಿಂದ ಹೊರಟರು.

ಹೈದರಾಬಾದದಲ್ಲಿಯ ಹಿಂದುಸ್ತಾನದ ಏಜಂಟ ಜನರಲರಾದ ಶ್ರೀ ಕೆ. ಎಂ. ಮುನಶಿಯವರ ಪತ್ನಿಯವರಾದ ಸೌ. ಲೀಲಾವತಿ ಮುನಶಿಯವರು ತಾ. ೧೮ ಕ್ಕೆ ವಿಶೇಷ ವಿಮಾನದಿಂದ ಹೈದರಾಬಾದಕ್ಕೆ ಪ್ರಯಾಣ ಬೆಳೆಸಿದರು.

ಆರ್. ಎಸ್. ಎಸ್.ದವರ ಚಟುವಟಿಕೆಗಳು ಸಾರ್ವಜನಿಕ ಹಿತದೃಷ್ಟಿಯಿಂದ ಘಾತಕವಾದವುಗಳಿದ್ದು ಯಾವ ಸರಕಾರೀ ನೌಕರರೂ ಅವುಗಳಲ್ಲಿ ಭಾಗವಹಿಸಕೂಡದೆಂದು ಆಜ್ಞೆ ವಿಧಿಸಲಾಗಿದೆಯೆಂದೂ ಈಗಿನ ಪರಿಸ್ಥಿತಿಯಲ್ಲಿ ಈ ಸಂಘದ ಮೇಲಿದ್ದ ನಿರ್ಬಂಧವನ್ನು ತೆಗೆಯುವ ಇಚ್ಛೆ ಸರಕಾರಕ್ಕಿಲ್ಲವೆಂದೂ ಮುಂಬಯಿ ಗೃಹಮಂತ್ರಿ ಮುರಾರಜಿಯವರು ಹೇಳಿದರು.

ತಾತ್ಪೂರ್ತಿಕವಾಗಿ ನಿಲ್ಲಿಸಲ್ಪಟ್ಟ ಜಿ. ಆಯ್. ಪಿ. ರೇಲ್ವೆ ಗಾಡಿಗಳ ಓಡಾಟವನ್ನು ತಾ. ೨೧ ರಿಂದ ಪುನಃ ಪ್ರಾರಂಭಿಸಲಾಗಿರುವದಾಗಿ ಅಧಿಕೃತ ವಾರ್ತೆ ಬಂದಿದೆ.

ಮುಂಬಯಿ ಪ್ರಗತಿಶೀಲರ ಸಭೆಯಲ್ಲಿ ನೆಹರೂ ಸರಕಾರಕ್ಕೆ ಸಂಪೂರ್ಣ ಬೆಂಬಲ ಕೊಡಬೇಕೆಂಬ ಗೊತ್ತುವಳಿ ಮಾಡಲಾಯಿತು.

ಸಮಾಜವಾದೀ ಪಕ್ಷದ ಹೈದರಾಬಾದ ಸಮಿತಿಯ ಅಧ್ಯಕ್ಷರಾದ ಶ್ರೀಮತಿ ಅರುಣಾ ಅಸಫ ಅಲಿ ಅವರು ಒಂದು ಪ್ರಕಟನೆ ಹೊರಡಿಸಿ, ಸಮಾಜವಾದಿ ಕಾರ್ಯಕರ್ತರೆಲ್ಲ ಹೈದರಾಬಾದ ಹೋರಾಟದ ಬಗ್ಗೆ ಸಂಗ್ರಹಿಸಿಟ್ಟ ಶಸ್ತ್ರಾಸ್ತ್ರಗಳನ್ನೆಲ್ಲ ತಾವಿರುವ ಪ್ರದೇಶದ ಅಧಿಕಾರಿಗಳ ವಶಕ್ಕೆ ಕೂಡಲೇ ಒಪ್ಪಿಸಬೇಕೆಂದು ಬಿನ್ನವಿಸಿದ್ದಾರೆ.

ಹಿಂದುಸ್ತಾನದ ಕಮ್ಯುನಿಸ್ಟ ಪಕ್ಷದ ಕೇಂದ್ರ ಕಚೇರಿಯಿಂದ ಹೊರಟ ಪ್ರಕಟನೆಯಲ್ಲಿ ಹೈದರಾಬಾದದಲ್ಲಿ ಹಿಂದೀ ಸೈನ್ಯಕ್ಕೆ ದೊರೆತ ವಿಜಯದ ಪರಿಣಾಮವಾಗಿ ನಿಜಾಮರ ಆಳಿಕೆಯು ಕೊನೆಗೊಳ್ಳುವಂತಾಗಲಿ ಎಂದು ಕೇಳಿಕೊಳ್ಳಲಾಗಿದೆ

ಹಿಂದುಸ್ತಾನದ ಸಮಾಜವಾದಿ ಪಕ್ಷದವರು ಹೈದರಾಬಾದದ ಬಗ್ಗೆ ಹೀಗೆ ಗೊತ್ತುವಳಿ ಮಾಡಿದ್ದಾರೆ. ಸರ್ವ ನಾಶವಾಗುವಾಗ ಶಕ್ಯವಿದ್ದಷ್ಟನ್ನು ಉಳಿಸಿಕೊಳ್ಳಲು ನಿಜಾಮರು ಪ್ರಯತ್ನಿಸುವರು. ನಿಜಾಮರ ಹಕ್ಕಷ್ಟೇ ಅಲ್ಲ ಅವರ ವಂಶಜರ ಆಳಿಕೆಯ ಹಕ್ಕೂ ಕೊನೆಗೊಳ್ಳುವಂತಾಗಬೇಕು. ರಜಾಕಾರರನ್ನು ನಿರ್ಮೂಲನೆ ಮಾಡಬೇಕು.

ತ್ರಿವರ್ಣ ಧ್ವಜವನ್ನು ಸದಾ ತಮ್ಮ ಮನೆಯ ಮೇಲಾಗಲೀ ಯಾವದೇ ವ್ಯಾಪಾರೋದ್ಯೋಗದ ಕಟ್ಟಡದ ಮೇಲಾಗಲೀ ಹಾರಿಸಬಾರದೆಂದೂ ವಿಶೇಷ ಸಂದರ್ಭದಲ್ಲಿ ಮಾತ್ರ ಹಾರಿಸಬೇಕೆಂದೂ ಅದನ್ನು ಅಲಕ್ಷಿಸಿ ಏರಿಸಿದ ಧ್ವಜವನ್ನು ಹಾಗೆ ಬಿಟ್ಟುಬಿಟ್ಟರೆ ಅದು ಧ್ವಜಕ್ಕೆ ಅವಮಾನವೆಂದೂ ಮುಂಬಯಿ ಸರಕಾರದ ಪ್ರಸಿದ್ಧಿ ಖಾತೆಯು ಪ್ರಕಟನೆ ಹೊರಟಿದೆ.

ಈಗಿರುವ ತಾಲೂಕಾ ಡೆವಲಪ್‌ಮೆಂಟ ಅಸೋಸಿಯೇಶನ್ ಎಂಬ ಸಂಸ್ಥೆಯನ್ನು ಪುನರ್ಘಟಿಸಿ ಅದಕ್ಕೆ ತಾಲೂಕಾ ಡೆವಲಪ್‌ಮೆಂಟ ಬೋರ್ಡ ಎಂದು ಹೆಸರಿಟ್ಟು ಈ ಸಂಸ್ಥೆಯ ಮುಖಾಂತರ ಗ್ರಾಮೋದ್ಧಾರದ ಕಾರ್ಯವನ್ನು ಕೈಕೊಳ್ಳಲಾಗುವದೆಂದು ಮುಂಬಯಿ ಸರಕಾರದ ಪ್ರಕಟನೆ ಹೊರಟಿದೆ.

## ಮದ್ರಾಸ

ಭಾಷಾನುಗುಣ ಪ್ರಾಂತರಚನೆಯ ಬಗ್ಗೆ ಮದ್ರಾಸ ಮಂತ್ರಿಮಂಡಲವು ಒಮ್ಮತದ ಉತ್ತರ ಕಳಿಸಿದೆಯೆಂದೂ ಆ ಉತ್ತರವನ್ನು ಶಾಸನ ಸಭೆಯಲ್ಲಿ ಸಾದರಪಡಿಸುವದಿಲ್ಲವೆಂದೂ ಮದ್ರಾಸದ ಮಾನ್ಯ ಅರ್ಥಮಂತ್ರಿ ಶ್ರೀ ಬಿಜಯ ಗೋಪಾಲರೆಡ್ಡಿ ಅವರು ತಾ ೨೧ ರಂದು ಹೇಳಿದರು.

ಮದ್ರಾಸದ ಅರ್ಥಮಂತ್ರಿ ಶ್ರೀ ಬಿ. ಗೋಪಾಲರೆಡ್ಡಿಯವರು ಆಕಾಶವಾಣಿಯಲ್ಲಿ ಭಾಷಣಮಾಡುತ್ತ ಅಭಿವೃದ್ಧಿ ಯೋಜನೆಗಳ ವೆಚ್ಚವನ್ನು ಬಾಯಿಗೂಡಿಸಲು ಕೇಂದ್ರ ಸರಕಾರವು ಪ್ರಾಂತಗಳಿಗೆ ಹೆಚ್ಚಿನ ಆದಾಯ ಮಾರ್ಗಗಳನ್ನು ಕಲ್ಪಿಸಿಕೊಡಬಹುದೆಂದು ನಂಬಿಗೆ ವ್ಯಕ್ತಪಡಿಸಿದರು.

ಕೇಂದ್ರ ಸರಕಾರವು ಪ್ರಾಂತಿಕ ಸರಕಾರಗಳಿಗೆ ಸಹಾಯ ಧನ ಕೊಡುವ ಪದ್ಧತಿಯಲ್ಲಿ ಇನ್ನೂ ೫ ವರ್ಷ ಯಾವ ಬದಲಾವಣೆಯೂ ಆಗುವದಿಲ್ಲವೆಂದೂ ೧೯೪೭-೪೮ ರಲ್ಲಿ ಕೇಂದ್ರ ಸರಕಾರವು ಮದ್ರಾಸ ಸರಕಾರಕ್ಕೆ ೮೪೭॥ ಲಕ್ಷ ರೂ ಕೊಟ್ಟಿತೆಂದೂ ಮದ್ರಾಸ ಅರ್ಥಸಚಿವ ಶ್ರೀ ಬಿ. ಗೋಪಾಲರೆಡ್ಡಿಯವರು ಮದ್ರಾಸ ಶಾಸನ ಸಭೆಯಲ್ಲಿ ಹೇಳಿದರು.

## ಪ. ಬಂಗಾಲ

ಜಮಾಯತಉಲ್ ಉಲೇಮಾಹಿಂದ ಪರವಾಗಿ ತಾ ೧೯ಕ್ಕೆ, ಹೈದರಾಬಾದವನ್ನು ಹಿಂದುಸ್ತಾನವು ಗೆದ್ದಬಗ್ಗೆ ಸಂತೋಷಪ್ರದರ್ಶಿಸಲು ಮುಸಲ್ಮಾನರ ಸಭೆಸೇರಿತ್ತು. ಅದೇಕಾಲಕ್ಕೆ ಸಯ್ಯದ ಕಾಶೀಂರಜವಿಯ ಬಂಧನದ ಸುದ್ದಿ ಬಂದಿತು. ಕೂಡಲೆ ಸಭಿಕರೆಲ್ಲ ಪ್ರಚಂಡ ಕರತಾಡನದಿಂದ ಆನಂದ ವ್ಯಕ್ತಪಡಿಸಿದರು.

ಸದಿಯಾ ಗಡಿಯ ಪ್ರದೇಶದಲ್ಲಿ ಭೂಮಿಯು ಕುಸಿದುಬಿದ್ದುದರಿಂದ ೬೦ ಮನೆಗಳ ಹಳ್ಳಿಯೊಂದು ಹೂತುಹೋಗಿ ೫೦೦ ಜನರು ಮರಣಹೊಂದಿದರೆಂದು ಅಧಿಕೃತವಾಗಿ ತಿಳಿದು ಬಂದಿದೆ.

ಭಾರತದ ಹೊಸ ರಾಜ್ಯಘಟನೆಯಲ್ಲಿ ಹಿಂದೀ ಕೇಂದ್ರಸರಕಾರ ಮತ್ತು ಸಂಸ್ಥಾನಗಳಲ್ಲಿ ಕಂದಾಯದ ಹಂಚುವಿಕೆಯ ಬಗ್ಗೆ ಸೂಚಿಸಲಾದ ಯೋಜನೆಯು ದೋಷಯುಕ್ತವಾಗಿದೆಯೆಂದು ಒಂದು ಗೊತ್ತುವಳಿಯು ಪಶ್ಚಿಮ ಬಂಗಾಲ ಶಾಸನ ಸಭೆಯಲ್ಲಿ ಸ್ವೀಕರಿಸಲ್ಪಟ್ಟಿದೆ. ಪ. ಬಂಗಾಲ ಸರಕಾರದ ಅರ್ಥಿಕ ಮಂತ್ರಿಗಳಾದ ಶ್ರೀ ನಲಿನೀರಂಜನ ಸರಕಾರರು ಈ ಗೊತ್ತುವಳಿಯನ್ನು ಮಂಡಿಸಿದ್ದರು.

## ಸಂಯುಕ್ತಪ್ರಾಂತ

ಸಂಯುಕ್ತಪ್ರಾಂತ ವಸ್ತುಸಂಗ್ರಹಾಲಯದವರಿಗೆ ಸುವರ್ಣ ನಾಣ್ಯವೊಂದು ದೊರೆತಿದ್ದು ಅದು ಮೊದಲನೆಯ ಕುಮಾರಗುಪ್ತ ರಾಜನ ಕಾಲದ್ದೆಂದು ತಿಳಿಯಲಾಗಿದೆ. ನಾಣ್ಯದ ಮೇಲೆ ಖಡ್ಗಧಾರಿ ಅರಸನು ಕುದುರೆಯ ಮೇಲೆ ಕುಳಿತ ಚಿತ್ರವಿದೆ. ಬ್ರಾಹ್ಮೀಲಿಪಿಯಲ್ಲಿ ಸಂಸ್ಕೃತದಲ್ಲಿ ಕುಮಾರ ಗುಪ್ತ ಅರಸನ ನಾಮ ನಿರ್ದೇಶವಿದೆ.

---

ಮುಂಬಯಿಯ ಗವ್ಹರ್ನರರಾದ ಮಹಾರಾಜ ಸಿಂಗರು ದಕ್ಷಿಣ ಕಮಾಂಡದ ಸೇನಾಪತಿ ರಾಜೇಂದ್ರಸಿಂಹರಿಗೆ ಅಭಿನಂದನಪರಸಂದೇಶ ಕಳಿಸಿದ್ದು, ಮುಂಬಯಿಪ್ರಾಂತದ ನಾಗರಿಕರು ಮತ್ತು ಸರಕಾರದ ಪರವಾಗಿ ಹೈದರಾಬಾದದಲ್ಲಿ ಗಳಿಸಿದ ಯಶಕ್ಕಾಗಿ ಅವರನ್ನೂ ಅವರ ಅಧಿಕಾರಿ ವರ್ಗವನ್ನೂ ಸೈನಿಕರನ್ನೂ ತಾವು ಅಭಿನಂದಿಸುವದಾಗಿ ತಿಳಿಸಿರುವರು.

ಮುಂಬಯಿ ಸರಕಾರದವರು ಒಂದು ಸಮಿತಿಯನ್ನು ನೇಮಿಸಿ ವೈದ್ಯರಿಗೆ ಔಷಧಕ್ಕೆ ಬೇಕಾಗುವ ಗಾಂಜಾ, ಅಫು ಇತ್ಯಾದಿ ಮಾದಕ ದ್ರವ್ಯಗಳ ವಿಷಯವಾಗಿ ವಿಚಾರಣೆ ನಡೆಸಲು ಕೇಳಿಕೊಂಡಿದ್ದಾರೆ.

ಕೋಯನಾ ನದಿಯ ಜಲ ವಿದ್ಯುತ್ ಯೋಜನೆಯು ೧೯೫೦ ರಲ್ಲಿ ಪ್ರಾರಂಭವಾಗಿ ೧೯೫೮ ರಲ್ಲಿ ಪೂರ್ತಿಯಾಗಬಹುದೆಂದೂ ಈ ಯೋಜನೆಯಿಂದ ವಿಜಾಪುರ, ಸಾತಾರೆ, ರತ್ನಾಗಿರಿ ಜಿಲ್ಲೆಗಳಿಗೆ ಲಾಭವಾಗುವದೆಂದೂ ಡಾ. ಗಿಲ್ಡರರು ಒಂದು ಸಂದರ್ಶನದಲ್ಲಿ ಹೇಳಿದರು. ಇದರಿಂದ ವಿಜಾಪುರ ಜಿಲ್ಲೆಯ ೪ ಲಕ್ಷ ೪೦ ಸಾವಿರ ಎಕರೆ ಭೂಮಿಗೆ ನೀರು ದೊರಕುವದೆಂದು ತಿಳಿಯುತ್ತದೆ.

## ಹೊಸದಿಲ್ಲಿ

ಹಿಂದುಸ್ತಾನದ ವಿದ್ಯಾಸಚಿವರಾದ ಮೌ. ಅಝಾದರು ಒಂದು ಪ್ರಕಟನೆ ಹೊರಡಿಸಿ, ಪಂಡಿತಜಿಯವರನ್ನಲ್ಲದೆ ಹೈದರಾಬಾದದ ವಿಷಯದಲ್ಲಿ ಇಷ್ಟಾದ ಹಾನಿ ಇರಲಿಲ್ಲವೆಂದೂ ನಿಜಾಮರಿಗೆ ಮೊದಲೇ ಬುದ್ಧಿ ಬಂದಿದ್ದರೆ ಚನ್ನಾಗಿತ್ತೆಂದೂ ಹಿಂದೀ ಮುಸ್ಲಿಂರೆಲ್ಲ ಸರಕಾರದೊಡನೆ ಸಹಕರಿಸಿದ್ದಕ್ಕೆ ತಾವು ಧನ್ಯರೆಂದೂ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ನಿಜಾಮ ರಾಜ್ಯದಲ್ಲಿ ಈ ವರೆಗೆ ನಡೆಯುತ್ತಿದ್ದ ಜಾತೀಯ ಶೋಷಣೆ ಹಾಗು ಕಪಟ ಇನ್ನು ಮುಂದೆ ನಡೆಯದಂತೆ ಅವಶ್ಯಕ ಮುಂಜಾಗ್ರತೆ ವಹಿಸುವದು ಅವಶ್ಯವಿದೆ ಎಂದು ಹಿಂದುಸ್ತಾನ ಟೈಮ್ಸ ಪತ್ರಿಕೆಯು ಅಭಿಪ್ರಾಯಪಟ್ಟಿದೆ.

ಹಿಂದುಸ್ತಾನದೊಡನೆ ಸಶಸ್ತ್ರ ಯುದ್ಧವನ್ನೇ ಹೂಡಿದ ನಿಜಾಮರಿಗೆ ಇನ್ನು ಸೌಲತ್ತು ತೋರಿಸುವದು ನ್ಯಾಯ್ಯವಾಗದು ಎಂದೂ ದೂರದೃಷ್ಟಿಯ ಮತ್ತು ದೀರ್ಘಾಲೋಚನೆಯ ದೃಢ ಧೋರಣೆಯನ್ನು ವಹಿಸಿ ನಿಜಾಮರ ಭವಿತವ್ಯವನ್ನು ನಿರ್ಣಯಿಸಬೇಕೆಂದೂ ಅಲ್ಲಿಯ ಸಮಗ್ರ ಆಡಳಿತವು ಪ್ರಜಾಸತ್ತಾತ್ಮಕ ತತ್ವದ ಮೇಲೆಯೇ ನಿಲ್ಲಬೇಕೆಂದೂ ದಿಲ್ಲಿಯ ನ್ಯೂಜ ಕ್ರಾನಿಕಲ್ ಪತ್ರಿಕೆಯು ಸೂಚಿಸಿದೆ.

ಪ್ರಾಂತಿಕ ಮುಖ್ಯ ಪ್ರಧಾನರ ಹಾಗು ಆಹಾರ ಮಂತ್ರಿಗಳ ಪರಿಷತ್ತು ತಾ ೧೮ ಕ್ಕೆ ಸೇರಿ ಉಪಸಮಿತಿಗಳ ವರದಿಯನ್ನು ಮಾನ್ಯಮಾಡಿತು. ಕೇಂದ್ರ ಸರಕಾರವೂ ಅವುಗಳ ವರದಿಯನ್ನು ಮಾನ್ಯ ಮಾಡಿದಲ್ಲಿ ಕಳೆದ ವರ್ಷದಂತೆ ಮತ್ತೆ ಆಹಾರ ಧಾನ್ಯ ಸೀದಾ ಜಾರಿಯಲ್ಲಿ ಬರುವದೆಂದು ಹೇಳಲಾಗುತ್ತದೆ. ಈ ಬಗ್ಗೆ ಸರಕಾರದ ನಿರ್ಣಯವು ಸೋಮವಾರ ಹೊರಬೀಳಬಹುದೆಂದು ನಿರೀಕ್ಷೆಯಿದೆ.

ಹಿಂದುಸ್ತಾನದ ಗವರ್ನರ ಜನರಲ್ಲರಾದ ಚಕ್ರವರ್ತಿ ರಾಜಗೋಪಾಲಾಚಾರ್ಯರ ಅಂಗರಕ್ಷಕರ ಫೌಜದಾರನಾಗಿದ್ದ ಮಮ್ತಾಜ ಅಲಿ ಎಂಬವನು ದಿಲ್ಲಿಯ ವೆಲಿಂಗ್ಡನ್ ವಿಮಾನ ನಿಲ್ದಾಣದಲ್ಲಿ ತಾ ೧೬ ರಂದು ಪಾಕಿಸ್ತಾನಕ್ಕೆ ಹೊರಟು ನಿಂತಾಗ ಸಂಶಯದ ಮೇಲೆ ದಿಲ್ಲಿ ಪೋಲೀಸರು ಬಂಧಿಸಿದರು. ಅವನ ಹತ್ತಿರ ಒಂದು ಜೀವಂತ ಕಾಡತೂಸು ೧೮ ತೆರನಾದ ಕಾಡತೂಸುಗಳಿದ್ದವು. ಇವನೊಂದಿಗೆ ಅಪ್ಪಣೆಚೀಟಿಯ ಅವಧಿ ಮೀರಿದ ಇನ್ನಿಬ್ಬರು ಪಾಕಿಸ್ತಾನಿ ಮುಸಲ್ಮಾನರಿದ್ದರು. ಇವರನ್ನೂ ಬಂದಿಸಲಾಗಿದೆ.

ಮುಸ್ಲಿಂ ರಾಷ್ಟ್ರೀಯ ರಕ್ಷಕ ದಳಗಳ ರಹಿಮತುಲ್ಲಾ ಎಂಬವನು ಅನುಮತಿ ಚೀಟಿಯಿಲ್ಲದೆ ಹಿಂದುಸ್ತಾನವನ್ನು ಪ್ರವೇಶಿಸಿದ್ದಕ್ಕಾಗಿ ಬಂಧಿಸಲ್ಪಟ್ಟಿದ್ದಾನೆ.

ಭಾರತ ಪಾಕಿಸ್ತಾನ ಗಡಿಯಲ್ಲಿ ಹಿಂದೀ ಸೈನ್ಯವು ಪಾಕಿಸ್ತಾನ ಪ್ರದೇಶದಲ್ಲಿಯ ಕೆಲ ಹಳ್ಳಿಗಳ ಮೇಲೆ ಗುಂಡು ಹಾರಿಸಿತೆಂದು ಪಶ್ಚಿಮ ಪಂಜಾಬ ಸರಕಾರವು ಹೊರಡಿಸಿದ ಪ್ರಕಟನೆಯು ಸರ್ವಥಾ ಸುಳ್ಳಿರುವದೆಂದು ತಾ. ೧೯ ಕ್ಕೆ ಹಿಂದೀ ಸೈನ್ಯಪಡೆಯ ವಕ್ತಾರನೊಬ್ಬನು ಹೇಳಿದನು.

ದಕ್ಷಿಣ ಕಮಾಂಡದ ಜಿ. ಓ. ಸಿ ಗಳಾದ ಲೆಪ್ಟಿನೆಂಟ ಜನರಲ್ ಮಹಾರಾಜ ಶ್ರೀ. ರಾಜೇಂದ್ರ ಸಿಂಹಜಿಯವರು ಪಂ. ಜವಾಹರಲಾಲರಿಂದ ಬಂದ ಅಭಿನಂದನಪರ ತಂತಿಗೆ ಕೃತಜ್ಞತೆ ವ್ಯಕ್ತಪಡಿಸಿದ್ದಾರಲ್ಲದೆ ಅವರ ಸಂದೇಶದಿಂದ ಉತ್ಸಾಹಿತರಾಗಿರುವದಾಗಿ ಅರುಹಿದ್ದಾರೆ.

ಜುಲೈ ತಿಂಗಳ ಜವಳಿ ನಿಯಂತ್ರಣದ ಧೋರಣೆಯ ನಂತರ ದಿಲ್ಲಿಯಲ್ಲಿ ಬಟ್ಟೆಯ ಬೆಲೆ ಮೊದಲಿಗಿಂತ ೧೦೦ ಕ್ಕೆ ೧೦ ರಿಂದ ೨೦ ರ ವರೆಗೆ ಇಳಿದಿದ್ದ, ವ್ಯಾಪಾರಸ್ಥರು ಕೂಡಿಟ್ಟ ಅರಿವೆಯ ಗಂಟುಗಳೆಲ್ಲ ಈಗ ಬಯಲಿಗೆ ಬಂದಿರುವದಾಗಿ ತಿಳಿಯುತ್ತದೆ.

## ಪೂರ್ವ ಪಂಜಾಬ

ಪಶ್ಚಿಮ ಪಂಜಾಬದ ಲ್ಯಾಲಪುರ, ಸಾರಗೋಧಾ, ಸಿಯಾಲಕೋಟ ಮತ್ತು ಮಾಂಟಗೋಮರಿ ಜಿಲ್ಲೆಗಳಲ್ಲಿ ಒತ್ತಾಯದಿಂದ ಮತಾಂತರಿಸಲ್ಪಟ್ಟ ೧೫೦ ಹಿಂದು, ಶೀಖ, ಹರಿಜನ ಮೊದಲಾದವರನ್ನು ಹಿಂದೀ ಸೈನಿಕರು ಪಾರುಮಾಡಿ ಅಮೃತಸರಕ್ಕೆ ಕಳಿಸಿದ್ದಾರೆಂದು ತಿಳಿಯುತ್ತದೆ.

## ಪಾಕಿಸ್ತಾನ

ಪಾಕಿಸ್ತಾನ ರಾಷ್ಟ್ರೀಯ ರಕ್ಷಕದಲದ ವಿಭಾಗಗಳನ್ನು ಪಾಕಿಸ್ತಾನ ಸೈನ್ಯದಲ್ಲಿ ಸೇರಿಸಿಕೊಳ್ಳಲು ಪಾಕಿಸ್ತಾನ ಸರಕಾರವು ಆಜ್ಞೆ ವಿಧಿಸಿದೆ.

## ಕಾಂಗ್ರೆಸ್ ಅಧ್ಯಕ್ಷರ ಆಯ್ಕೆ

ಕಾಂಗ್ರೆಸ ಕಾರ್ಯಕಾರೀ ಸಮಿತಿಯವರು ಕಾಂಗ್ರೆಸ ಅಧ್ಯಕ್ಷರ ಆಯ್ಕೆಯ ಬಗ್ಗೆ ಕೆಳಗಿನ ದಿನಗಳನ್ನು ಗೊತ್ತುಮಾಡಿರುವರು.

(೧) ಎ. ಆಯ್. ಸಿ. ಸಿ. ಕಚೇರಿಯಲ್ಲಿ ನಾಮಪತ್ರ ಸ್ವೀಕರಿಸುವ ಕೊನೆಯ ದಿನ ಅಕ್ಟೋಬರ ೪ ತಾ.

(೨) ನಾಮಪತ್ರಗಳನ್ನು ಹಿಂತೆಗೆದುಕೊಳ್ಳುವ ಕೊನೆಯ ದಿನ ಅಕ್ಟೋಬರ ೧೫ ತಾ.

(೩) ಒಬ್ಬರಿಗಿಂತ ಹೆಚ್ಚು ಉಮೇದವಾರರು ಇದ್ದಲ್ಲಿ ಆಯಾ ಪ್ರಾಂತಗಳ ಪ್ರತಿನಿಧಿಗಳು ಕಾಂಗ್ರೆಸ್ಸಿನ ಹೊಸ ಘಟನೆಯ ೧೬ ನೇ ಕಲಮಿನಲ್ಲಿ (ಡಿ) ಕಾಣಿಸಿದ ಪ್ರಕಾರ ತಾ. ೨೪ ಅಕ್ಟೋಬರ ದಿವಸ ಸೇರತಕ್ಕದ್ದು.

ಪ್ರತಿನಿಧಿಗಳ ಸಭೆಯನ್ನು ಅಕ್ಟೋಬರ ೨೪ ಕ್ಕೆ ಕರೆಯಬಹುದು ಮತ್ತು ಒಬ್ಬನೇ ಉಮೇದವಾರನಿದ್ದಲ್ಲಿ ಉಳಿದ ವಿಷಯಗಳು ಇಲ್ಲದಲ್ಲಿ ಅದನ್ನು ಹಿಂದುಗಡೆ ರದ್ದು ಪಡಿಸಬಹುದು.

ಕಾಂಗ್ರೆಸ ಅಧ್ಯಕ್ಷ ಚುನಾವಣೆಯ ಬಗ್ಗೆ ಡಾ. ಪಟ್ಟಾಭಿ ಸೀತಾರಾಮಯ್ಯ, ಶ್ರೀ ಶಂಕರರಾವ ದೇವ ಡಾ. ಪ್ರಫುಲ್ಲಚಂದ್ರಘೋಷ ಮತ್ತು ಪುರುಷೋತ್ತಮದಾಸ ತಂಡನ ಹೀಗೆ ನಾಲ್ವರು ನಾಮ ಪತ್ರ ಕೊಟ್ಟಿದ್ದಾರೆಂದು ತಿಳಿಯುತ್ತದೆ.

---

## ಕ್ವಾಶೀಂ ರಜವಿಯ ಬಂಧನ
### ಆತ್ಮಹತ್ಯೆಯ ಪ್ರಯತ್ನ

ಹೈದರಾಬಾದದ ಅನರ್ಥ ಪರಂಪರೆಗೆ ಕಾರಣನೂ ರಜಾಕಾರರ ನಾಯಕನೂ ಆದ ಕಾಶೀಂ ರಜವಿಯು ತನ್ನ ಗಡ್ಡವನ್ನು ಬೋಳಿಸಿಕೊಂಡು ನಿಜಾಮರು ಶರಣಾಗತರಾದ ದಿನ ತಾ ೧೭ ರ ರಾತ್ರಿ ಆತ್ಮಹತ್ಯೆಮಾಡಿಕೊಳ್ಳಲು ಪ್ರಯತ್ನಿಸಿದ್ದನು. ಆದರೆ ಮೇಜರ ಜನರಲ ಜೆ. ಎನ್. ಚೌಧರಿಯವರ ಆಜ್ಞೆಯ ಮೇರೆಗೆ ಹೈದರಾಬಾದ ಸೈನಿಕರು ಇವನನ್ನು ಬಂಧಿಸಿದ್ದಾರೆ. ಈ ಸಮಾಚಾರವನ್ನು ಮೇ. ಜ. ಎಲ್ ಎಡ್ರೂಜರು ತಾ ೧೯ ರಂದು ಜನರಲ ರಾಜೇಂದ್ರ ಸಿಂಗಜಿಯವರು ಸಿಕಂದರಾಬಾದಕ್ಕೆ ಬಂದಕೂಡಲೆ ಅವರಿಗೆ ತಿಳಿಸಿದರು. ಕಾಶೀಂ ರಜವಿಯನ್ನು ಈಗ ಹಿಂದಿ ಸೈನಿಕರ ಕಾವಲಿನಲ್ಲಿ ಅಜ್ಞಾತಸ್ಥಳಕ್ಕೆ ಒಯ್ಯಲಾಗಿದೆ. ಇವನ ಬಗ್ಗೆ ಮೇ. ಜ. ಚೌಧರಿಯವರು ವಿನೋದಯುಕ್ತವಾಗಿ, ಕೆಂಪುಕೋಟೆಗೆ ಹೋಗಬೇಕೆಂದು ಮೋಹವಿದ್ದವನಿಗೆ ಅಲ್ಲಿಯೇ ಸ್ಥಳಕೊಡಲಾಗುವದು ಎಂದು ನುಡಿದರು.

---

## ಮಧ್ಯಪ್ರಾಂತದಲ್ಲಿ ಹೊಸ ಸಂಬಳ ಪ್ರಮಾಣ

ಪ್ರಾಂತಿಕ ಪಗಾರ ಸಮಿತಿಯವರು ಕಳೆದ ಜೂನ ೨೨ ಕ್ಕೆ ಒಪ್ಪಿಸಿದವರದಿಯ ಮುಖ್ಯ ಅಂಶಗಳನ್ನು ಮಧ್ಯಪ್ರಾಂತ ಸರಕಾರವು ಸ್ವೀಕರಿಸಿದೆಯೆಂದು ಸರಕಾರೀ ಪ್ರಕಟನೆ ಹೊರಟಿದೆ. ಈ ವರದಿಯಲ್ಲಿ ಹೇಳಲಾದ ಹೊಸ ಸಂಬಳ ಪ್ರಮಾಣವನ್ನು ಅಮಲಿನಲ್ಲಿ ತರುವದರಿಂದ ಪ್ರಾಂತಿಕ ಸರಕಾರಕ್ಕೆ ಪ್ರತಿವರ್ಷ ೧ ಕೋಟಿ ೬ ಲಕ್ಷ ರೂಪಾಯಿ ಹೆಚ್ಚು ವೆಚ್ಚ ಬರುವದೆಂದು ತಿಳಿಯುತ್ತದೆ. ಮಧ್ಯಪ್ರಾಂತದಲ್ಲಿ ಒಟ್ಟು ೫೪ ಸಾವಿರ ಸರಕಾರೀ ನೌಕರರಿರುವರ.

# ನಾರದ ಭವಿಷ್ಯ

ಜೋತಿಷಿ— ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯ ಕಥನ ಆಫೀಸ ಖಡೇಬಝಾರ, ಬೆಳಗಾವಿ.

## ಸಪ್ಟೆಂಬರ ೨೭ ರಿಂದ ಅಕ್ಟೋಬರ ೩ ರ ವರೆಗೆ

### ಮೇಷ

ಎಲ್ಲರ ಪ್ರಕೃತಿ ಉತ್ತಮ. ಆದರೆ ಪ್ರತಿಯೊಬ್ಬರ ವರ್ತನೆಯು ನಿಮಗೆ ಆತಂಕ ಒಡ್ಡುವಂತಹದು ಮತ್ತು ದೊಡ್ಡ ಸ್ತನಕ್ಕೆ ಕುಂದು ತರುವಂಥಹದು. ಬಂಧು ವರ್ಗದಲ್ಲಿ ಹೆಚ್ಚಳ. ಮಕ್ಕಳೊಳಗೆ ಅತ್ಯಂತ ಪ್ರಿಯವಾದ ಒಬ್ಬರ ಸ್ಥಳಾಂತರದಿಂದ ದುಃಸಹ ವಿರಹ. ಉದ್ಯೋಗದಲ್ಲಿ ಪ್ರಗತಿ ಕಡಿಮೆ. ಆದರೆ ಪ್ರತಿಷ್ಠೆ ಹೆಚ್ಚು ಮತ್ತು ಲಾಭ ಕುಂಬಾ. ಮಿತ್ರ ಸುಖ ಉತ್ತಮ. ಹಳೇ ಪರಿಚಯಸ್ಥರ ಭೆಟ್ಟಿ. ವಾದ ಮತ್ತು ಸ್ಪರ್ಧೆಯಲ್ಲಿ ಉತ್ತಮ ಯಶಸ್ಸು. ಸತ್ಕಾರ್ಯದಲ್ಲಿ ಸ್ವಲ್ಪಮಟ್ಟಿಗೆ ಖರ್ಚು. ಪ್ರವಾಸ ತೊಂದರೆಯದು. ಭೆಟ್ಟಿಯ ಕೆಲಸ ಕೊನೆಯಲ್ಲಿ ಫಲದಾಯಕ. ಆದರೆ ಮೊದಲು ಪರಸ್ಪರರಲ್ಲಿ ತಪ್ಪು ಕಲ್ಪನೆಯಾಗಿ ಬಹಳ ತ್ರಾಸದಾಯಕ. ಪತ್ರವ್ಯವಹಾರ ಉತ್ತಮ. ಅಶ್ವಿನಿಯ ಕೊನೆಯ ೩ ಮತ್ತು ಭರಣಿಯ ಮೊದಲನೆಯ ಚರಣಗಳಿಗೆ ತೊಂದರೆ ಕಡಿಮೆ. ತಾ. ೨೭, ೩೦, ೧ ಇವು ಅನುಕೂಲ.

### ವೃಷಭ

ಪ್ರಕೃತಿ ಉತ್ತಮ. ಸ್ತ್ರೀಸುಖ ನೆಟ್ಟಗೆ. ಆದರೆ ಉಳಿದಸಾಂಸಾರಿಕವಿಷಯಗಳಲ್ಲಿ ಹೆಂಡತಿಯ ಸಂಗಡ ಬಹಳ ಮತಭೇದ. ಅಪ್ತರು ಇಲ್ಲವೆ ನೆರೆಹೊರೆಯವರ ಪ್ರೇಮದ ಸಲುವಾಗಿ ಸ್ವತಃಕ್ಕೆ ಸಮ್ಮತಲ್ಲದ ಕೆಲಸಕ್ಕೆ ಒಪ್ಪಿಗೆ. ಮತ್ತು ಏನಾದರೂ ಹಣ ಕೊಡಬೇಕಾಗುವ ಪ್ರಸಂಗ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ತನ್ನ ಬುದ್ಧಿಯೇ ತನಗೆ ವಿರುದ್ಧವಾಗಿ ಸುತ್ತಿಕೊಳ್ಳುವಂಥ ಪ್ರಸಂಗ! ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಉತ್ತಮ. ರೋಹಿಣಿಯ ಕೊನೆಯ ೩ ಮತ್ತು ಪುನರ್ವಸುವಿನ ಮೊದಲಿನ ಚರಣಗಳಿಗೆ ತೊಂದರೆಯಿಂದಲೇ ಯಶಸ್ಸು. ತಾ. ೨೭, ೨೮, ೨೯, ೩ ಇವು ಅನುಕೂಲ.

### ಮಿಥುನ

ನಿಮ್ಮ ಪ್ರಕೃತಿ ಉತ್ತಮ. ಆದರೆ ಹೆಂಡತಿಗೆ ಚಿಲ್ಲರೆ ಕ್ಲೇಶ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಉತ್ತಮ. ಸ್ಥಾವರದಲ್ಲಿ ಯಾವದಾದರೊಂದು ಸುಖದಾಯಕ ಘಡಾಮೋಡಿ. ಮಿತ್ರಸುಖ ಉತ್ತಮ. ಆದರೆ ಅವರ ಪರಿವಾರದಲ್ಲಿ ಕ್ಲೇಶ. ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ ಮತ್ತು ಲಾಭ ಉತ್ತಮ. ಒಂದು ಶುಭ ಕಾರ್ಯದಲ್ಲಿಯೇ ಆದರೂ ಜನರ ಆಗ್ರಹಕ್ಕಾಗಿ ನಿರ್ದಿಷ್ಟಕ್ಕಿಂತಲೂ ನಿರಿ ಖರ್ಚು ಮಾಡುವ ಪ್ರಸಂಗ! ವಾದ ಮತ್ತು ಸ್ಪರ್ಧೆಯಲ್ಲಿ ಒಡಂಬಡಿಕೆಯಾಗುವ ಸಂಭವ. ಆದರೆ ಹೀಗಾಗದಿದ್ದರೆ ನಿಮ್ಮ ಪಕ್ಷ ಹಿಮ್ಮೆಟ್ಟುವದು. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತಲೂ ಹೆಚ್ಚು ಅನುಕೂಲ. ಮೃಗಾದ್ರ ... ನೇ, ಆರಿದ್ರಾದ ೨ ನೇ ಮತ್ತು ೪ ನೇ ಮತ್ತು ಪುನರ್ವಸುವಿನ ಮೊದಲನೇ ಈ ಚರಣಗಳಿಗೆ ತೊಂದರೆ ಕಡಿಮೆ. ತಾ. ೨೭, ೨೮, ೨೯, ೩೦ ಇವು ಅನುಕೂಲ.

### ಕರ್ಕ

ಪ್ರಕೃತಿ ಅಸ್ವಸ್ಥತೆಯಲ್ಲಿಯೇ. ಹೆಂಡತಿಯದೂ ಹಾಗೆಯೇ ಮತ್ತು ಎಲ್ಲವಿಷಯಗಳಲ್ಲಿ ಪ್ರಾಪಂಚಿಕ ಸ್ಥಿತಿ ಚಮತ್ಕಾರಿಕವೆಂದೇ ಹೇಳ... ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ ಗೋವಾಕ... ಗಳು ಉತ್ತಮ. ಆದರೆ ಅನಗಿದೆಯೆಂದು ತಿಳಿಯ... ಬಹಳ. ವಾದವೂ

ಶ್ರೀ. ಬಿ. ... ಕೆ. ... ವದು. ನಿರ

ಹಳ್ಳಾಳ ಮುನಿಸಿಪಾಲಿಟಿಯ ... ಗಳನ್ನು ಪುನಃ ... ಹನಗಳಿಂದ ಅಪ

ಕೆಂದು ನೇಮಿಸಲಾಗಿದೆ.

ಘಾತದ ಸಂಭವ. ಪ್ರವಾಸ ಮತ್ತು ಭೆಟ್ಟಿ ಇವು ಪತ್ರವ್ಯವಹಾರಕ್ಕಿಂತಲೂ ಉತ್ತಮ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷದ ಮೊದಲನೇ ಈ ಚರಣಗಳಿಗೆ ತೊಂದರೆ ಕಡಿಮೆ. ತಾ. ೨೮, ೨೯, ೨, ೩ ಇವು ಅನುಕೂಲ.

### ಸಿಂಹ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಮಾತ್ರ ಉತ್ತಮ. ಮಕ್ಕಳ ಕಡೆಯಿಂದ ಆಗುವ ದುರ್ವರ್ತನೆಯ ಖಂಡನೆ ಮಾಡಿದ್ದರಿಂದ ಹೆಂಡತಿಯು ನಿಮ್ಮ ಸಂಗಡ ಕೆಲವು ದಿವಸ ಮಾತಾಡದಿರುವರು. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಇವು ಬಹಳ ಉತ್ತಮ. ಆದರೆ ಪ್ರತಿಷ್ಠೆ! ಅಸ್ಪೃಶ್ಯತ್ವೇ. ಕಾನೂನು ಇಲ್ಲವೆ ಅಧಿಕಾರದ ದುರುಪಯೋಗ ಮಾಡಿಕೊಂಡಿರೆಂದು ಜನಮತವಾದದ್ದರಿಂದ ಸರಳ ಮಾತುಗಳಿಗೂ ಅಡಚಣಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹೆಚ್ಚು ಯಶಸ್ಸು. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತಲೂ ಹೆಚ್ಚು ಉತ್ತಮ. ಮಘಾದ ಕೊನೆಯ ೩ ಮತ್ತು ಪೂರ್ವಾದ ಮೊದಲನೇ ಈ ಚರಣಗಳಿಗೆ ತೊಂದರೆ ಕಡಿಮೆ. ತಾ. ೨೭, ೩೦, ೧, ೨ ಇವು ಅನುಕೂಲ.

### ಕನ್ಯಾ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮ. ಆದರೂ ಉಳಿದ ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ಹೆಚ್ಚು. ಹೆಂಡತಿ ಮತ್ತು ಮಕ್ಕಳ ಕಡೆಯಿಂದ ಮನಸ್ಸಿನ ವಿರುದ್ಧ ಖರ್ಚು ಮತ್ತು ವರ್ತನೆ. ಉದ್ಯೋಗದಲ್ಲಿ ಪ್ರಗತಿ ಕಡಿಮೆ ಆದರೆ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಖರ್ಚು ಸಹ ಬಹಳ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಟ್ಟುವ ಸಂಭವ. ಮನಸ್ಸಿಗೆ ಸೊಗಸಿಲ್ಲದ ಕನಸುಗಳು. ಸ್ಥಾವರದಲ್ಲಿ ಸ್ವಲ್ಪ ಹಾನಿ. ಇಲ್ಲವೆ ಅಡಚಣಿ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಉತ್ತಮ. ಹಸ್ತಾದ ಕೊನೆಯ ೩ ಮತ್ತು ಚಿತ್ತಾದ ಮೊದಲನೇ ಈ ಚರಣಗಳಿಗೆ ತೊಂದರೆ ಹೆಚ್ಚು. ತಾ. ೨೭, ೨೮, ೨ ಇವು ಅನುಕೂಲ.

### ತುಲಾ

ನಿಮ್ಮ ಮತ್ತು ನಿಮ್ಮ ಹೆಂಡತಿಯ ಪ್ರಕೃತಿ ಉತ್ತಮ. ಆದರೆ ವಜನದಾರ ಮಿತ್ರರ ಕಡೆಯಿಂದ ತಮ್ಮ ಸಂತತಿಯ ಉತ್ತಮ ವರ್ತನೆಗೂ ಹೆಸರು ಇಲ್ಲವೆ ಆಕ್ಷೇಪ ಹೊರಿಸುವದರಿಂದ ಉಭಯತರ ಮನಸ್ಸಿಗೂ ಸಂತಾಪ ಮತ್ತು ವ್ಯಗ್ರತೆ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಉತ್ತಮ. ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ ಮತ್ತು ಲಾಭ ಉತ್ತಮವಾಗಿದ್ದರೂ ನಿರರ್ಥಕ ಖರ್ಚು ಬಹಳ. ಬಂಧುಜನಗಳಿಂದ ಕೆಲವು ವ್ಯವಹಾರಗಳಲ್ಲಿ ಮೋಸಗೊಳ್ಳುವ ಸಂಭವ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಯಶಸ್ಸು. ಪ್ರವಾಸಾದಿ ಕೆಲಸಗಳು ಹಿತಕಾರಕ. ಚಿತ್ರಾದ ೪ ನೇ ಸ್ವಾತಿಯ ೨ ನೇ ಮತ್ತು ೪ ನೇ ಮತ್ತು ವಿಶಾಖಾದ ಮೊದಲಿನ ಈ ಚರಣಗಳಿಗೆ ತೊಂದರೆ ಕಡಿಮೆ. ತಾ. ೨೭, ೨೮, ೨೯, ೩೦ ಇವು ಅನುಕೂಲ.

### ವೃಶ್ಚಿಕ

ಪ್ರಕೃತಿ ಸಾಧಾರಣವೇ. ಆದರೆ ಹೆಂಡತಿ ಮತ್ತು ಮಕ್ಕಳ ಸುಖಉತ್ತಮ. ಕೆಲವೊಂದು ಕಾರ್ಯಗಳಲ್ಲಿ ಮಿತ್ರರು ಮತ್ತು ಶತ್ರುಗಳಿಂದ ಸಮವಾಗಿಯೇ ವರ್ಚಸ್ಸು. ಸ್ಥಾವರದಲ್ಲಿ ಸ್ವಲ್ಪ ಹೊಸವೃದ್ಧಿ ಆದರೆ ಅದರ ದೆಸೆಯಿಂದ ಅಂದಾಜಿಗಿಂತಲೂ ಖರ್ಚು ಬಹಳ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಉತ್ತಮ. ಆದರೆ ಲಾಭ ಕಡಿಮೆ. ಸಾದಾ ಮಾತಿಗೂ ಬಹಳ ವಿಪರ್ಯಾಸ ಆಗುವ ಅಂಜಿಕೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯತರ ಲ್ಲಿಯೂ ಸಮಾನ ಸ್ಥಿತಿ. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಉತ್ತಮ. ಅನುರಾಧೆಯ ಕೊನೆಯ ೩ ಮತ್ತು ಜೇಷ್ಠಾದ ಮೊದಲನೇ ಈ ಚರಣಗಳಿಗೆ ತೊಂದರೆ ಕಡಿಮೆ. ತಾ. ೨೮, ೨೯, ೨, ೩ ಇವು ಅನನುಕೂಲ.

### ಧನು

ಪ್ರಕೃತಿಗೆ ಕಿಂಚಿತ್ ಕ್ಲೇಶ ಮತ್ತು ಹೆಂಡತಿ ಮತ್ತು ಮಕ್ಕಳ ಸಂಗಡ ಹೆಚ್ಚಿನ ವಿರೋಧ. ಎಲ್ಲ ವಿಷಯಗಳಲ್ಲಿ ಪ್ರಾಪಂಚಿಕ ಅನವಸ್ಥೆ. ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ ಮತ್ತು ಲಾಭವೂ ಕುಂಬಾ ಆದರೆ ಖರ್ಚು ಇದ್ದುದಿ ಮುಮ್ಮಡಿಗಿಂತ ಹೆಚ್ಚು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹೆಚ್ಚು ಅನುಕೂಲ. ನೌಕರಿ ಇದ್ದರೆ ಕರ್ತವ್ಯ ಕಠೋರವಾಗುವ ಪ್ರಸಂಗ. ಪ್ರವಾಸಾದಿ ಕಾರ್ಯಗಳು ಹಿತಕಾರಕ. ಮೂಲಾದ ಕೊನೆಯ ೩ ಮತ್ತು ಪೂರ್ವಾಷಾಢಾದ ಮೊದಲನೇ ಈ ಚರಣಗಳಿಗೆ ತೊಂದರೆ ಕಡಿಮೆ. ತಾ. ೩೦, ೧, ೨, ೩ ಇವು ಅನುಕೂಲ.

### ಮಕರ

ಪ್ರಕೃತಿಸಾಧಾರಣವೇ. ಆದರೆ ಉಳಿದವರದು ಉತ್ತಮ. ಸ್ಥಾವರದಲ್ಲಿ ಕೆಲವೊಂದು ಅನುಕೂಲ ಮಾರ್ಪಾಟ. ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ ಮತ್ತು ಲಾಭ ಉತ್ತಮ. ಆದರೆ ಪ್ರತಿಯೊಂದರಲ್ಲಿ ನಿರ್ದಿಷ್ಟ ಮಾಡಿದ ನಿಯಮ. ಇಲ್ಲವೆ ಯುಕ್ತಿಗೆ ತಡೆ ಹಾಕುವ ಯೋಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಹೆಚ್ಚು ಉತ್ತಮ. ಶ್ರವಣಾದ ಕೊನೆಯ ೩ ಮತ್ತು ಧನಿಷ್ಠಾದ ಮೊದಲನೇ ಈ ಚರಣಗಳಿಗೆ ತೊಂದರೆಯಿಂದಲೇ ಯಶಸ್ಸು. ತಾ ೨೮, ೨೯, ೩ ಇವು ಅನುಕೂಲ.

### ಕುಂಭ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಆದರೆ ಆ ಮಾನದಿಂದ ಸ್ತ್ರೀಸುಖ ಕಡಿಮೆ. ಮಕ್ಕಳಲ್ಲಿ ಕುಂಬಾ ಉನ್ನತಿ. ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ ಮತ್ತು ಲಾಭ ಇವು ಉತ್ತಮ. ಸ್ಥಾವರದಲ್ಲಿ ಅನುಕೂಲ ಪಲ್ಲಟ. ವಾಹನಸುಖ. ಕೈಕೆಳಗಿನ ಜನರಿಂದ ಹಿತದಕ್ಷತೆಯ ಕೃತಿಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳ ಪ್ರಾಬಲ್ಯ ಹೆಚ್ಚು. ಮಿತ್ರರು ಅಪ್ರಿಯ ಮಾತು ಆಡುವದಕ್ಕೆ ಬಹಳ ಅಗ್ರಹ ಪಡುವರು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಉತ್ತಮ. ಧನಿಷ್ಠಾದ ೪ ನೇ ಶತತಾರಕೆಯ ೨ ನೇ ಮತ್ತು ೪ ನೇ ಮತ್ತು ಪೂರ್ವಾಭಾದ್ರಪದೆಯ ಮೊದಲನೇ ಈ ಚರಣಗಳಿಗೆ ತೊಂದರೆ ಕಡಿಮೆ. ತಾ. ೨೭, ೩೦, ೧ ಇವು ಅನುಕೂಲ.

### ಮೀನ

ಪ್ರಕೃತಿ ಉತ್ತಮ ಆದರೆ ಮನಸ್ಸಿಗೆ ಇಲ್ಲದ್ದೊಂದು ವಿಚಾರದ ಚಿಂತೆ. ಬಂಧುಗಳಲ್ಲಿ ವಿರೋಧ, ಸ್ತ್ರೀಸುಖ ಕಡಿಮೆ. ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ ಮತ್ತು ಲಾಭ ಹೆಚ್ಚು ಉತ್ತಮ. ಆದರೆ ಪಾಲುಗಾರ ಕಡೆಯಿಂದ ಖರ್ಚು ಇದ್ದತ್ತೇ! ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಸಿಗುವ ಯಶಸ್ಸಿಗಿಂತ ಇಲ್ಲವೆ ಲಾಭಕ್ಕಿಂತ ಶಕ್ತಿವಿನ ಹಾನಿಯು ಮಾತ್ರ ಬಹಳ ಹೆಚ್ಚು. ಜೀವದ ಗೆಳೆಯನಲ್ಲಿ ಒಬ್ಬನ ವಿರೋಧ ಇಲ್ಲವೆ ಸ್ಥಳಾಂತರದಿಂದ ವಿರಹ. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಉತ್ತಮ. ಉತ್ತರಾಭಾದ್ರಪದದ ಕೊನೆಯ ೩ ಮತ್ತು ರೇವತಿಯ ಮೊದಲನೇ ಈ ಚರಣಗಳಿಗೆ ತೊಂದರೆ ಕಡಿಮೆ. ತಾ. ೨೮, ೨೯, ೨, ೩ ಇವು ಅನುಕೂಲ.

## ಕಳಕೊಂಡ ಪತ್ರ

(೨ನೆಯ ಪುಟದಿಂದ)

ಕಾಗದದ ಮಹತ್ವವು ಅವಳ ಲಕ್ಷ್ಯದಲ್ಲಿ ಸಹ ಬಂದಿರಲಿಲ್ಲ.

"ಅಂದರೆ ವಸಂತನ ಕೂಡ ಹಗಲೆಲ್ಲ ಇರುವ ಹುಡಿಗಿಯು ನಿಮ್ಮ ಮಗಳೋ? ನನಗೆ ಇದು ಗೊತ್ತಿದ್ದಿಲ್ಲ. ಒಳ್ಳೆ ಸ್ವಭಾವದ ಮತ್ತು ಅಂದವಾದ ಹುಡುಗಿ ಇರುವಳು. ನಮ್ಮ ವಸಂತನಿಗೆ ಅವಳು ನಿಜವಾಗಿ ಅನುರೂಪಳಿರುವಳು. ಇದಕ್ಕೆ ನಿಮ್ಮ ಸಮ್ಮತಿ ಇರುವದೋ ಮಿಸ್ಟರ್ ದೇಶಪಾಂಡೆ? " ರಾವಬಹಾದ್ದೂರರು ಗೋವಿಂದರಾಯನನ್ನು ತಮ್ಮ ಕಣ್ಣಿನ ಮೇಲಿನ ಕನ್ನಡಕದೊಳಗಿಂದ ನೋಡುತ್ತ ಮುಗುಳುನಗೆಯಿಂದ ಕೇಳಿದರು.

ಗೋವಿಂದರಾಯನ ಹೃದಯವು ಆನಂದದಿಂದ ಉಕ್ಕೇರಿ ಬಂತು. ಅವನ ಕಣ್ಣುಗಳಲ್ಲಿ ಆನಂದಬಾಷ್ಪಗಳು ಕೂಡಿ ಸುತ್ತುಮುತ್ತಲಿನ ದೃಶ್ಯವೇ ಅವನಿಗೆ ಕಾಣದಾಯಿತು. ಆ ಆನಂದಬಾಷ್ಪಗಳಲ್ಲಿಯೇ ಅವನ ಕಣ್ಣೆದುರಿಗೆ ತಿರುಪತಿಯ ವೆಂಕಟರಮಣನ ಮೂರ್ತಿಯು ಅಸ್ಪಷ್ಟವಾಗಿ ಬಂದು ನಿಂತಿತು. ಗೋವಿಂದರಾಯನು ಇನ್ನು ವೆಂಕಟರಮಣನಿಗೆ ಆರತಿಯನ್ನು ಬೆಳಗಿಸದಿರುವನೆ?

# ಪುಸ್ತಕ ಪರಿಚಯ

[illegible] -ಸಂ.]

## ಗೀತಾಪ್ರವಚನಗಳು

ಮೂಲ: ಶ್ರೀ. ವಿನೋಬಾ ಭಾವೆ. ಅನುವಾದ ಶ್ರೀ ಬಸವರಾಜ ಕಟ್ಟೀಮನಿ ಮುತ್ತು ಸಿದ್ದನಹಳ್ಳಿ ಕೃಷ್ಣಶರ್ಮ. ಗಾಂಧೀ ಸಾಹಿತ್ಯ ಸಂಘ, ಮಲ್ಲೇಶ್ವರಂ, ಬೆಂಗಳೂರು. ೨೯೨ ಪುಟ, ರೂ. ೪

ಗಾಂಧೀಜಿಯ ಕುಲುಮೆಯಲ್ಲಿ ರೂಪಿಸಲ್ಪಟ್ಟ ಮಾನವ ಚರಿತ್ರಗಳಲ್ಲಿ, ಶ್ರೀ ವಿನೋಬಾ ಭಾವೆಯವರದು, "ಉಚ್ಚ ವಿಚಾರ, ಸರಳ ಜೀವನ" ಈ ಆದರ್ಶವನ್ನು ಸಂಪೂರ್ಣವಾಗಿ ಮೈಗೂಡಿಸಿಕೊಂಡ ಒಂದು ಅದ್ವಿತೀಯ ಉದಾಹರಣೆ. ಅವರ ತೀಕ್ಷ್ಣ ಮತಿಯಿಂದ ಅವರ ಚಾರಿತ್ರ್ಯಕ್ಕೆ ಒಂದು ಮೆರಗು ಬಂದಿದೆ. ಪ್ರಾಚೀನ ಭಾರತೀಯ ಅಧ್ಯಾತ್ಮಿಕ ಸಾಹಿತ್ಯದ ಆಳದಲ್ಲಿರುವ ಅಣಿ ಮುತ್ತುಗಳನ್ನು ಆಯ್ದು ತೋರಿಸುವ ಧರ್ಮದಾನದ ಪುಣ್ಯ ಕಾರ್ಯವನ್ನು ಅವರು ಸತತವಾಗಿ ಸಾಗಿಸುತಿದ್ದಾರೆ. ಆಚಾರ್ಯ ಬಿರುದು ಅವರಿಗೆ ಬಹಳ ಸಮಂಜಸವಾಗಿ ಒಪ್ಪುತ್ತದೆ. ಅವರು ನಿರ್ಮಿಸಿರುವ ಸಾಹಿತ್ಯದಲ್ಲಿ ಉಪದೇಶಪರವಾದುದೇ ಹೆಚ್ಚು. ಆದರೆ ಅದು ತೂಕಡಿಸುವಂತೆ ಮಾಡುವ ಒಣ ಒಣ ಪರೋಪದೇಶ ಪಾಂಡಿತ್ಯವೂ ಅಲ್ಲ; ಶಬ್ದಾಡಂಬರದಿಂದ ಕೇಳುವವರನ್ನು ದಂಗುಬಡಿಸುವ ವಾಚಾಲತನವೂ ಅಲ್ಲ. ನಮ್ಮ ಧರ್ಮ ಗ್ರಂಥಗಳ ಒಳತಿರುಳನ್ನು ಸವಿದು ಬಲ್ಲ ಅವರಾಡುವ ಮಾತುಗಳು ಒಂದು ಹೊಸ ಸೊಬಗನ್ನು ತೋರಿಸುತ್ತವೆ.

ಪ್ರಸ್ತುತ ಗ್ರಂಥದಲ್ಲಿ ೧೯೩೨ ರಲ್ಲಿ ಆಚಾರ್ಯ ವಿನೋಬಾ ಅವರು ತಮ್ಮ ಅಚ್ಚುಮೆಚ್ಚಿನ ಭಗವದ್ಗೀತೆಯನ್ನು ಕುರಿತು ನಡೆಸಿದ ೧೮ ಪ್ರವಚನಗಳು ಅಡಕವಾಗಿವೆ. ಕಠಿನವಾದ ವಿಚಾರಗಳನ್ನು ಸರಳ ಶಬ್ದಗಳಲ್ಲಿ ವ್ಯಕ್ತಗೊಳಿಸುವ ಅವರ ಸಾಮರ್ಥ್ಯ ಇಲ್ಲಿ ಚನ್ನಾಗಿ ವ್ಯಕ್ತವಾಗಿದೆ. ಗೀತೆಯ ಅಭ್ಯಾಸಿಗಳು ಇದನ್ನು ತಮ್ಮ ಸಂಗ್ರಹದಲ್ಲಿ ಸೇರಿಸಿಕೊಳ್ಳದಿದ್ದರೆ ಅದು ಅಪೂರ್ಣವೇ ಸರಿ. ಮರಾಠಿಯಲ್ಲಿರುವ ಮೂಲವನ್ನು ಕನ್ನಡಕ್ಕೆ ಅನುವಾದ ಮಾಡುವಾಗ ಹಲವೆಡೆ ಪ್ರವಚನಕಾರರಿಗೆ ಅನ್ಯಾಯವಾಗಿದೆಯೆಂದು ನಮಗನಿಸುತ್ತದೆ. ಶ್ರೀ ವಿನೋಬಾ ಅವರಿಗೆ ಸಾಕಷ್ಟು ಕನ್ನಡ ಬರುತ್ತದೆ. ಅನುವಾದವನ್ನು ಅವರಿಗೆ ತೋರಿಸಿ ಆ ಮೇಲೆ ಪ್ರಕಟಿಸಿದ್ದರೆ ಒಳಿತಾಗುತಿತ್ತೇನೊ.

ಪ್ರತಿಗಳನ್ನು ಬಳೇಪೇಟೆ (ಬೆಂಗಳೂರು) ಯಲ್ಲಿರುವ "ವಿಚಾರ ಸಾಹಿತ್ಯ ಲಿಮಿಟೆಡ್" ಇವರಿಂದ ಪಡೆಯಬಹುದು.

## ಅನುರಾಗಿ

ಬರೆದವರು ಶ್ರೀ 'ಧನ್ವಂತ'. ಪ್ರಕಾಶಕರು ಶ್ರೀ ಎಚ್. ಎನ್. ರಾವ್ ಬ್ರದರ್ಸ್ ಚಿಕ್ಕಪೇಟೆ, ಬೆಂಗಳೂರು ನಗರ. ಪುಟ ೫೦, ಬೆಲೆ ಹತ್ತಾಣೆ.

'ಅನುರಾಗಿ' ಒಂದು ನೀಳ್ಗತೆ. ಇದರಲ್ಲಿ ಸಾಹಿತಿಯೊಬ್ಬ ಕಥಾನಾಯಕ. ಅವನು ಅನನ್ಯ ಶರಣಳಾದ ಒಬ್ಬಳನ್ನು ಮದುವೆಯಾಗಿ ಸಮಾಜ ಸುಧಾರಣೆಯ ಕಾರ್ಯಕ್ಕೊಂದು ಮಾದರಿ ಹಾಕಿಕೊಡುತ್ತಾನೆ. ಪುಸ್ತಕದಲ್ಲಿ ಕಥಾಕೌತುಕಕ್ಕಿಂತ ವಿವೇಕಯುಕ್ತವಾದ ವಿಚಾರಕ್ಕೇ ಪ್ರಾಧಾನ್ಯವಿದೆ. ಈ ಹೊಸ ದೃಷ್ಟಿಯ ಕತೆ ಓದಲರ್ಹವಾಗಿದೆ; ಪುಟ ಮಾತ್ರ ೪ ತಲೆ ಕೆಳಗಾಗಿವೆ.

## ರನ್ನನ ಗದಾಯುದ್ಧ

ಬರೆದವರು: ಶ್ರೀ ಜಿ. ಪಿ. ರಾಜರತ್ನಂ ಅವರು. ಪ್ರಕಾಶಕರು: ಹಿಂದ್ ಕಿತಾಬ್ಸ್ ಲಿಮಿಟೆಡ್ ಬೊಂಬಾಯಿ, ಬೆಂಗಳೂರು. ಪುಟ ೧೦೪, ಬೆಲೆ ಒಂದೂ ಕಾಲು ರೂಪಾಯಿ.

ಈ ಪುಸ್ತಕದಲ್ಲಿ ಮಹಾಕವಿ ರನ್ನನ ಗದಾಯುದ್ಧ ನಾಟಕದ ಹೊಸಗನ್ನಡ ಅನುವಾದವನ್ನು ಕಾಣಬಹುದು. ಶುದ್ಧವಾಗಿ ಸರಳವಾಗಿ ಕಥೆ ಸಾಗಿರುವುದು. ವಿದ್ಯಾರ್ಥಿಗಳಿಗೆ ಭಾಷಾಪರಿಚಯಕ್ಕೂ ರಸಗ್ರಹಣಕ್ಕೂ ಬಹಳ ಅನುಕೂಲವಾಗಿದೆ. ಮೂಲವನ್ನು ಒಮ್ಮೆಲೇ ಓದಲಾರದವರಿಗೆ ಇದರಿಂದ ಬಹಳ ಪ್ರಯೋಜನವಾಗುವುದು. ಇಂಥ ಪ್ರಯತ್ನಗಳು ಕನ್ನಡದಲ್ಲಿ ಇನ್ನೂ ಹೆಚ್ಚು ಹೆಚ್ಚಾಗಿ ಆಗಬೇಕು.

## ಆರ್ಯ ಬಾವುಟ

ಬರೆದವರು ಶ್ರೀ ಶ್ರೀಪಾದ ದಾಮೋದರ ಸಾತ್ವಳೇಕರ, ಸ್ವಾಧ್ಯಾಯ ಮಂಡಲ, ಔಂಧ. ಅನುವಾದಕರು ಶ್ರೀ ಕೆ. ರಾಮಚಂದ್ರ ಭಟ್ಟ ವಿಶಾರದ, ಕಾರ್ಕಳ ಪ್ರಕಾಶಕರು ಯಾರೆಂದು ಕಾಣಿಸಿಲ್ಲ. ಪುಟ ೫೬, ಬೆಲೆ ಆರಾಣೆ.

'ಆರ್ಯಬಾವುಟ'ದಲ್ಲಿ ವೇದಗಳ ಕಾಲದಿಂದ ಬಾವುಟಗಳ ಬಳಕೆ ಹೇಗೆ ಇಂದಿನ ವರೆಗೆ ನಾನಾ ವಿಧವಾಗಿ ಹಿಂದುಸ್ತಾನದಲ್ಲಿ ನಡೆದು ಬಂದಿದೆ ಎಂಬುದನ್ನು ವಿವೇಚಿಸಿ ಸಾಧಾರವಾಗಿ ವಿಶದಪಡಿಸಲಾಗಿದೆ. ಇದಕ್ಕೆ ಐತಿಹಾಸಿಕ ಮತ್ತು ಸಂಶೋಧನಾತ್ಮಕ ಮಹತ್ವವಿದೆ. ಬಾವುಟದ ಮೇಲಿನ ಇಂಥ ಶಾಸ್ತ್ರೀಯ ಗ್ರಂಥ ಕನ್ನಡದಲ್ಲಿ ಇದು ವರೆಗೆ ಇದ್ದಂತೆ ತೋರುವುದಿಲ್ಲ. ಆದುದರಿಂದ ಈ ಅಪೂರ್ವ ಗ್ರಂಥವನ್ನು ಕನ್ನಡಿಗರಿಗೆ ಒದಗಿಸಿ ಕೊಟ್ಟ ಶ್ರೀ ರಾಮಚಂದ್ರಭಟ್ಟರು ಅಭಿನಂದನೀಯರು.

## ರಾಜಕೀಯ ಪರಿವರ್ತನೆ

ಬರೆದವರು ಶ್ರೀ ಎಚ್. ರಾಮಕೃಷ್ಣ ರಾವ್, ಪ್ರಕಾಶಕರ ಹೆಸರಿಲ್ಲ. ಪುಟ ೧೪೪ ಬೆಲೆ ೨ ರೂಪಾಯಿ.

ಈ ಪುಸ್ತಕದಲ್ಲಿ ಸಾಮಾನ್ಯ ಓದುಗರಿಗೆ ಕಥೆ ಹೇಳುವಂತೆ ಹೇಳಿದ ಕರ್ನಾಟಕದ ಇತಿಹಾಸದ ಅತಿ ಸ್ಥೂಲ ಸ್ವರೂಪವಿದೆ. ಭಾಷೆಯಲ್ಲಿ ದೋಷಗಳು ಬಹಳವಿವೆ. ಪುಸ್ತಕವನ್ನೇನೋ ಅಂದವಾಗಿ ಕಾಣುವಂತೆ ಮುದ್ರಿಸಲಾಗಿದೆ.

## ಹರಿಶ್ಚಂದ್ರ ಮಹಾ ಕಾವ್ಯದ ತಿರುಳು

ಬರೆದವರು– ಪಂ ಶ್ರೀ ಬಸವರಾಜ ಶಾಸ್ತ್ರಿಗಳು ಕೋಡಿಕೊಪ್ಪ ಮಠ, ವಿಜಾಪುರ ಪ್ರಕಾಶಕರು– ಶ್ರೀ ಶರಭರಾಜ ಕೋಡಿಕೊಪ್ಪಮಠ, ೧೦೨೦, ಬಸವರಾಜಭವನ, ವಿಜಾಪೂರ. ಪುಟ ೧೨೩, ಬೆಲೆ ರೂ. ೧।।.

ಪಂ. ಮುಳಿಯ ತಿಮ್ಮಪ್ಪಯ್ಯನವರು ಪಂಪ ಭಾರತವನ್ನು ಗದ್ಯಾನುವಾದ ಮಾಡಿದಂತೆ ಪಂ. ಬಸವರಾಜ ಶಾಸ್ತ್ರಿಗಳು ಹರಿಶ್ಚಂದ್ರ ಮಹಾಕಾವ್ಯದ ಮುಖ್ಯಾಂಶಗಳನ್ನು ಗದ್ಯಾನುವಾದಕ್ಕೆ ಇಳಿಸಿದ್ದಾರೆ. ಇಂಥ ಪ್ರಯತ್ನಗಳಿಂದ ಕನ್ನಡ ಕಲಿವ ವಿದ್ಯಾರ್ಥಿಗಳಿಗೆ ಬಹಳ ಅನುಕೂಲವಾಗುವುದೆಂಬುದರಲ್ಲಿ ಸಂದೇಹವಿಲ್ಲ.

## ಕಾಲದ ಕರೆ

ಬರೆದವರು– ಶ್ರೀ ಗಂಗಾಧರ ಚಿತ್ತಾಲರು. ಪ್ರಕಾಶಕರು– ಪರ್ಣಕುಟಿಗ್ರಂಥಮಾಲೆ, ಗೋಕರ್ಣ. ಪುಟ ಸಂಖ್ಯೆ ೪೫, ಬೆಲೆ ರೂ. ೧.

"ಕಾಲದ ಕರೆ" ಒಂದು ಕವನ ಸಂಗ್ರಹ. ಇದರಲ್ಲಿ ೨೫ ಕವನಗಳಿವೆ. ಇದರಲ್ಲಿಯ ಪ್ರತಿಯೊಂದು ಕವನವೂ ಎದೆ ತುಂಬಿ ಹೊರಸೂಸಿ ಬಂದಂತಿವೆ. ಕವನಗಳಲ್ಲಿ "ದಿಗ್ಭ್ರಾಂತ" "ನಾನು ಯಾರೊ, ನೀನು ಯಾರೊ" "ಈ ಮಣ್ಣ ಬಾಳು", "ಹಸಿರ ದೇವಿ", "ತಾಯನ್ನು ನೆನೆದು", "ಶಾಂತಿ ಗೀತ", ಇವು ಸೊಗಸಾಗಿವೆ. ಶ್ರೀಮಾನ್ ಚಿತ್ತಾಲರಿಂದ ಇಂತಹ ಕವನರತ್ನಗಳು ಇನ್ನೂ ಬೆಳಕಿಗೆ ಬರಲೆಂದು ಹಾರೈಸುತ್ತೇವೆ.

## ಹರಟೆ

# ಗುಳೇ ಹೊರಟ ದೇವತೆಗಳ ಗೋಳು

(ಲೇ:—ವೆಂಕಣ್ಣಾಚಾರ್ಯ ಪಪ್ಪು ಬಿ. ಎ. ಎಲ್ ಎಲ್. ಬಿ. ವಕೀಲ ಹುಬ್ಬಳ್ಳಿ)

ವಿಮಾನ ನಿಲ್ದಾಣವು ಸ್ವರ್ಗಾರೋಹಣಾಪೇಕ್ಷಿ ದೇವತೆಗಳಿಂದ ಕಿಕ್ಕಿರಿದು ತುಂಬಿ ಅವರ ಆರ್ತನಾದವು ಕೇಳುಗರ ಕಿವಿಗಳನ್ನು ಗಡುಚಿಕ್ಕಿವೆ. ಆ ನಾದವು ಸರಕಾರೀ ವಿರೋಧಿ ಪ್ರಚಾರವಾದದ್ದರಿಂದ ನಭೋವಾಣಿನಿಕೇತನದಿಂದ ಬಿತ್ತರಿಸಲ್ಪಟ್ಟಿಲ್ಲ.

ಹೇ೯೯... ಇಂದ್ರಾ! ಬಿನ್‌ತಂತಿ ಮೂಲಕ ಕಳಿಸಿದ ನಮ್ಮ ಬಿಚ್ಚೋಲೆಯಮಜಕೂರನ್ನು (open letter) ಯಾವದಾದರೂ ಸುದ್ದಿಕರ್ತನ ಸಂಸ್ಥೆಯು ತಡೆಹಿಡಿಯಿತ್ತದಯ್ಯಾ? ಕರ್ಮಭೂಮಿ, ಪುಣ್ಯಭೂಮಿ, ಭೂವೈಕುಂಠವಾದ ಭರತಭೂಮಿಯು ಇಂದು ಸ್ವತಂತ್ರವಾಗಿದೆ. ಎಲ್ಲ ದೇಶೀಯರ ರಾಯಭಾರಿಗಳು ತಮ್ಮ ತಮ್ಮ ದೇಶಗಳ ಸುರಕ್ಷಿತತೆಗಾಗಿ ನೇಮಕ ಹೊಂದಿದ್ದಾರೆ. ಹೇ ಇಂದ್ರಾ! ಸ್ವರ್ಗದ ರಾಯಭಾರಿಯ ನೇಮಕವು ಇನ್ನೂ ಆಗದ್ದರಿಂದ ತ್ರಿಕಾಲಜ್ಞಾನಿಗಳಾದ ನಮ್ಮಗಳಿಗೆ ಕೂಡ ನಮ್ಮ ಸ್ಥಿತಿಯು ಹೀಗಾದೀತೆಂದು ಅನ್ನಿಸಿರಲಿಲ್ಲ.

ಪಾಕಿಸ್ತಾನದಲ್ಲಿಯ ಹಿಂದುಗಳಂತೆ ಆಫ್ರಿಕೆಯಲ್ಲಿಯ ಹಿಂದೀಯರಂತೆ, ಜರ್ಮನಿಯಲ್ಲಿಯ ಯಹೂದ್ಯರಂತೆ, ಅಮೇರಿಕೆಯಲ್ಲಿಯ ನಿಗ್ರೋಗಳಂತೆ ನಮ್ಮ ಸ್ಥಿತಿಯಾಗಿದೆ.

ಸ್ವತಂತ್ರ ಹಿಂದುಸ್ತಾನದಲ್ಲಿ ಕೆಲವೆ ತಿಂಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳಾಗಿವೆ. ಇಂಡಿಯನ್ ಯೂನಿಯನ್ ಅಂತ ಹಿಂದುಸ್ತಾನದ ನಾಮಕರಣವಾಗಿದೆ. ಮತ್ತು ಧರ್ಮದ ತಳಹದಿಯ ಮೇಲಿನ ರಾಜ್ಯಾಡಳಿತೆ ಅಳಿದು ಹಿಂದು ದೇವತೆಗಳಾದ ನಮಗೆ ಅಲ್ಲಿ ಸ್ಥಾನವೇ ಇಲ್ಲದಂತಾಗಿದೆ. ಇಲ್ಲಿ ನೆಲಸಿದ ಪರಧರ್ಮೀಯರಿಗೆ ಮಾತ್ರ ತಮ್ಮ ದೇವರನ್ನೂ ಕಾಯಿದೆಗಳನ್ನೂ ಎಳ್ಳಷ್ಟೂ ಬದಲಾಯಿಸದೆ ಇಟ್ಟುಕೊಳ್ಳಲು ಶಾಸನಬದ್ಧ ಅನುವು ಇದೆ.

ದುಃಶಾಸನಗಳನ್ನು ಪಾಸು ಮಾಡಿ ವಿಶಾಲವಾದ ದೇವಸ್ಥಾನಗಳಲ್ಲಿ ನಮ್ಮ ಮನಸ್ಸಿನ ವಿರುದ್ಧ ಯಾರನ್ನು ಬಾಡಿಗೆಗೆ ತಂದು ಇಡುವರೊ ಇದರ ನೇಮವೇ ಇಲ್ಲ. ದೇವಸ್ಥಾನಗಳಿಗೆ ಪ್ರಸಾದಕ್ಕಾಗಿ ಹಾಕಿಕೊಟ್ಟ ಜಮೀನುಗಳನ್ನು ನಾವು ಪ್ರತ್ಯಕ್ಷ ಸಾಗುಮಾಡುವದಿಲ್ಲೆಂಬ ಕಾರಣದ ಮೇಲಿಂದ ಕಸಿದುಕೊಳ್ಳುವ ಕಾಯಿದೆಯಾಗಿದೆ. ಇರಲಿಕ್ಕೆ ಪ್ರಾಸಾದವಿಲ್ಲ ತಿನ್ನಲಿಕ್ಕೆ ಪ್ರಸಾದವಿರಲ್ಲ. ಧರ್ಮವೆಂದರೆ ಅಫೀಮು ಸಿರಿವಂತಿಕೆಯೆಂದರೆ ಅಪರಾಧವೆನ್ನುವ ಪಕ್ಷವು ಅಧಿಕಾರಾರೂಢವಾದರೆ ಗುಡಿಗಳೆಲ್ಲ ವಿಲಾಸಮಂದಿರಗಳಾಗಿ ಮಠಗಳೆಲ್ಲ ವಾಚನಾಲಯಗಳಾಗಿ ಎಲ್ಲಿ ಪರಿವರ್ತನೆಯಾಗಬಹುದೋ! ಶೇತಕಿ ಉದ್ಯೋಗ ವ್ಯಾಪಾರ ಎಲ್ಲವುಗಳ ರಾಷ್ಟ್ರೀಕರಣ, ಲಾಟರಿ ಚಹಾದ ಅಂಗಡಿ ಸರಕಾರವೇ ನಡೆಸುವ ಯೋಜನೆಯಿಂದ ಗುಡಿಗುಂಡಾರಗಳಿಗೆ ಸರಕಾರಿ ಕಾರಭಾರದ ಗಂಡಾಂತರ ಬರುವದಿಲ್ಲೆಂದು ಏತರ ಮೇಲಿಂದ? ಮಂಗನಿಂದ ಮನುಷ್ಯನಾದ ಹಿಂದೀಯನನ್ನೂ (ಹನುಮಂತ) ದೇವನನ್ನಾಗಿ (Superman) ಮಾಡುವದಕ್ಕೋಸ್ಕರ ಶರೆ, ಸಿಂದಿ, ಜೂಜಾಟ ಪ್ರತಿಬಂಧಕ ಮಾಡಿ ಒಂದು ತರಹದ "ವಿರಕ್ತ" ಶಾಹಿಯೇ (Puritan Rule) ಸ್ಥಾಪಿತವಾಗಿದೆಯಾದ್ದರಿಂದ ಎಲೈ ಮಘವಂತನೇ ನಿನಗೆ ಪ್ರಿಯವಾದ ಸುರಾಪಾನದ ಬಾಟ್ಲಿಗಳನ್ನೂ ಪಾಂಡವಪ್ರಿಯ ಜೂಜಾಟದ ಸಲಕರಣೆಗಳನ್ನೂ ಭೂಸುರಪ್ರಿಯರಾದ ದೇವ ದಾಸಿಯರನ್ನೂ ನಮ್ಮ ಲಗೇಜಿದಲ್ಲಿ ಹಾಕಿದ್ದಾರೆ. ಆದ್ದರಿಂದ ಹೇ ಪಾಕಶಾಸನಾ! ನಮ್ಮನ್ನು ಸ್ಥಾನಾಂತರಿಸಲಿಕ್ಕೆ ಟ್ರಿಕ್ ನಮೂನೆ ವಿಮಾನಗಳನ್ನು ತಡಮಾಡದೆ ಕಳಿಸು.

ಬ್ರಿಟಿಶರು ಹಿಂದುಸ್ತಾನ ಬಿಡುವ ಮುಂದೆ ಅವರು ದಯಪಾಲಿಸಿದ ಬಿರುದುಗಳನ್ನು ತಾರಿನಿಂದ ತಿರುಗಿ ಕಳಿಸಿದಂತೆ ಪರೀಕ್ಷೆಗೆ ಅಡ್ಡಾಗುವ, ಕಲಿಯಲಿಕ್ಕೆ ಜಡವಾಗುವ ನಮ್ಮ ಸಂಸ್ಕೃತ ಭಾಷೆಯನ್ನು, ಮನು–ಯಾಜ್ಞವಲ್ಕ್ಯರ ಕಾಯಿದೆಗಳನ್ನು ತ್ವರೆಯಿಂದ ನಮಗೆ ತಿರುಗಿ ಕಳಿಸಿದ್ದಾರೆ. ಇದಕ್ಕೂ ಹೆಚ್ಚಿನ ಅನ್ಯಾಯವೂ ಅಪಮಾನವೂ ನಮಗೆ ಭಾರತೀಯರಿಂದ ಆಗುವದುಳಿದಿದೆಯೋ?

ಹೇ ಪುರಂದರಾ! ನಮ್ಮನ್ನು ಸ್ಥಾನಾಂತರಿಸದಿದ್ದರೂ ಚಿಂತೆಯಿಲ್ಲ, ಭಾರತೀಯರ ವಿರುದ್ಧ ನಮ್ಮ ದೂರನ್ನು ಯು. ಎನ್. ಓಕ್ಕೆ ಮಾತ್ರ ಒಯ್ಯಲಿಕ್ಕೆ ನಮಗೆ ಉಪದೇಶಿಸಬೇಡ. ಅಲ್ಲಿ ಯುರೋಪಿಯನ್ ದೇವರ ದೂರು ಮಾತ್ರ ಮುಟ್ಟುತ್ತದೆ.

ರಾಕ್ಷಸರ ಕಾಟವನ್ನು ಸಹಿಸಿದ ನಮಗೆ ಹಿಂದೀಯರು ಕೊಡುವ ತ್ರಾಸ ಅಸಹನೀಯವಾಗಿದೆ. ತಾಜಾ ಚಾಷ್ಟಿ ಎಂದರೆ:— ರಾಷ್ಟ್ರ ಧುರೀಣರ ಹೆಸರುಗಳನ್ನು ಹೇಅರ ಕಟಿಂಗ ಸಲೂನುಗಳಿಗೆ ವಗೈರೆ ಕೊಡುವದನ್ನು ನಿಯಂತ್ರಿಸುವ ಕಾಯಿದೆ ಬರಲಿದೆ. ಆದರೆ ಕೃಷ್ಣಾ ಕೇಫೆ, ಅನ್ನಪೂರ್ಣಾ ಬೋರ್ಡಿಂಗ ಅಂಡ್ ಲಾಜಿಂಗ ಹೌಸ, ಮಹಾಲಕ್ಷ್ಮಿ ಹೇಅರ ಕಟಿಂಗ ಸಲೂನ ಮುಂತಾದವುಗಳ ಸ್ಥಿತಿಗೆ ಚ್ಯುತಿ ಬರಲಾರದು. ಮಾನವ ಮುಖಂಡರಿಗಿಂತ ನಾವು ಕೀಳೇ?

ಹೇ ಇಂದ್ರ! ಕೊಂಚವೂ ತಡಮಾಡದೆ ನಮ್ಮನ್ನು ಸ್ವರ್ಗಕ್ಕೆ ವರ್ಗಾಯಿಸಿಕೊ. ನಾವು ಸ್ವರ್ಗಸ್ಥರಾಗುವದನ್ನೇ ಹಿಂದೀಯರು ಕುತೂಹಲದಿಂದ ನಿರೀಕ್ಷಿಸುತ್ತಿದ್ದಾರೆ! ಸಹಾಯ ನೀಡು, ನೀಡು.

---

ಪರದೇಶದಿಂದ ೧,೯೭,೦೦೦ ಟನ ಆಹಾರ ಧಾನ್ಯ ಇನ್ನು ೩ ವಾರಗಳಲ್ಲಿ ಹಿಂದುಸ್ತಾನಕ್ಕೆ ಬರಲಿದೆಯೆಂದು ಭಾರತ ಸರಕಾರದ ನಿರೀಕ್ಷೆಯಿದೆ.

ಆಸ್ಟ್ರೇಲಿಯಾದಿಂದ ೧,೧೭೦೦೦ ಟನ್ ರಶಿಯಾದಿಂದ ೨೦,೫೫೦ ಟನ್ ಹೀಗೆ ಗೋದಿ ದೊರಕಬಹುದೆಂದು ಆಶೆಯಿದೆ. ರಶಿಯಾ ತಾನು ಕೊಡಬೇಕಾದುದನ್ನು ೬ ಹಡಗುಗಳಲ್ಲಿ ಕಳಿಸುವದೆಂದು ತಿಳಿಯುತ್ತದೆ.



ಈ ಪತ್ರಿಕೆಯನ್ನು ಹುಬ್ಬಳ್ಳಿ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ "ಲೋಕಶಿಕ್ಷಣ ಟ್ರಸ್ಟಿನ" ಪರವಾಗಿ ಹ. ರಾ. ಮೊಹರೆಯವರು ಮುದ್ರಿಸಿ ಪ್ರಕಟಿಸಿದರು.